# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 728 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಶ್ರೀನಿವಾಸ್.ಎಂ. (ಮಂಡ್ಯ) |
| 3) | ಉತ್ತರಿಸಬೇಕಾದ ದಿನಾಂಕ | 10/12/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಕೈಗಾರಿಕಾ ತರಬೇತಿ ಕೇಂದ್ರಗಳ ಸಿಬ್ಬಂದಿಗಳ ವೇತನ ಅನುದಾನಕ್ಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಈ ಬಗ್ಗೆ ಯಾವುದೇ ಕ್ರಮ ಕೈಗೊಳ್ಳದಿರಲು ಕಾರಣವೇನು; | ಸರ್ಕಾರದ ಆದೇಶ ಸಂಖ್ಯೆ: ಕಾಇ 284 ಇಟಿಐ 2005 ಬೆಂಗಳೂರು, ದಿನಾಂಕ: 21-08-2010 ರನ್ವಯ "ಇನ್ನು ಮುಂದೆ ಯಾವುದೇ ಕೈಗಾರಿಕಾ ತರಬೇತಿ ಕೇಂದ್ರವನ್ನು 1997ರ ಅನುದಾನ ಸಂಹಿತೆಗೆ ಒಳಪಡಿಸತಕ್ಕದ್ದಲ್ಲವೆಂದು" ಆದೇಶ ಹೊರಡಿಸಿರುವ ಹಿನ್ನೆಲೆಯಲ್ಲಿ ಯಾವುದೇ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಅವಕಾಶಗಳಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಸರ್ಕಾರವು ಈ ಬಗ್ಗೆ ಕೈಗೊಂಡ ಕ್ರಮಗಳೇನು; | |
| ಇ) | ವೇತನಕ್ಕಾಗಿ ಯಾವಾಗ ಅನುದಾನ ಬಿಡುಗಡೆಗೊಳಿಸಲಾಗುವುದು? | ಅನ್ವಯಿಸುವುದಿಲ್ಲ. |

ಸಂಖ್ಯೆ: ಕೌಉಜೀಇ 66 ಕೈತಪ್ರ 2020

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 892
ಸದಸ್ಯರ ಹೆಸರು : ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ. (ಬೈಂದೂರು)
ಉತ್ತರಿಸುವ ದಿನಾಂಕ : 10-12-2020
ಉತ್ತರಿಸುವ ಸಚಿವರು : ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ. | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಬೈಂದೂರು ಮೆಸ್ಕಾಂ ಉಪವಿಭಾಗದ ಗೋಳಿಹೊಳೆ ಗ್ರಾಮದ ಕೊಲ್ಲೂರು ಹಾಲ್ಕಲ್ ಎಂಬಲ್ಲಿ 33/11 ಕೆವಿ ವಿದ್ಯುತ್ ಕೇಂದ್ರ ನಿರ್ಮಾಣ ಹಾಗೂ ಹೇರೂರಿನಿಂದ ಉದ್ದೇಶಿತ 33 ಕೆವಿ ಮಾರ್ಗ ವಿಸ್ತರಣೆಗೆ ಅರಣ್ಯ ಇಲಾಖೆಯ ಅನುಮತಿ ಕೋರಿ ಆನ್‌ಲೈನ್‌ನ ಮುಖಾಂತರ ಅರ್ಜಿ ಸಲ್ಲಿಸಲಾಗಿದ್ದು, ಅನುಮತಿ ನೀಡುವಲ್ಲಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಕಂಬದಕೋಣೆಯಿಂದ ಕೊಲ್ಲೂರುವರೆಗೆ 33ಕೆವಿ ಹೆಚ್. ಟಿ ಲೈನ್ ನಿರ್ಮಾಣಕ್ಕೆ ಗೋಳಿಹೊಳೆ ಗ್ರಾಮ ಸ.ನಂ 164, 167, 44 ಮತ್ತು ಕಾಲ್ತೋಡು ಗ್ರಾಮದ ಸ.ನಂ 346ರಲ್ಲಿ ಒಟ್ಟು 4.9106 ಹೆಕ್ಟೇರ್. ಅರಣ್ಯ ಪ್ರದೇಶವನ್ನು ಉಪಯೋಗಿಸಲು ಅರಣ್ಯ ಸಂರಕ್ಷಣಾ ಕಾಯ್ದೆ, 1980ರಡಿ ಅನುಮೋದನೆ ಕೋರಿ ಕಾರ್ಯನಿರ್ವಾಹಕ ಇಂಜಿನಿಯರ್, ಮೆಸ್ಕಾಂ, ಕುಂದಾಪುರ ಇವರು ಕೇಂದ್ರ ಸರ್ಕಾರದ ವೆಬ್ ಪೋರ್ಟಲ್ ಮುಖಾಂತರ ಆನ್‌ಲೈನ್ ಪ್ರಸ್ತಾವನೆ ಸಂಖ್ಯೆ FP/KA/TRANS/46242/2020 ನ್ನು ದಿನಾಂಕ 14-06-2020ರಂದು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯು ಅಪೂರ್ಣವಾಗಿದ್ದರಿಂದ, ಪರಿಪೂರ್ಣ ಮಾಹಿತಿಯನ್ನು ದಾಖಲಾತಿಗಳೊಂದಿಗೆ ಸಲ್ಲಿಸುವಂತೆ ಅರಣ್ಯ ಇಲಾಖೆಯಿಂದ ದಿನಾಂಕ 29-06-2020 ರಂದು ಹಿಂದಿರುಗಿಸಲಾಗಿದ್ದು, ಅದರಂತೆ ಉಪಯೋಗಿ ಸಂಸ್ಥೆಯವರು ದಿನಾಂಕ 03-11-2020 ರಂದು ಪ್ರಸ್ತಾವನೆಯನ್ನು ಮರು ಸಲ್ಲಿಸಿರುತ್ತಾರೆ. ಆದರೆ ಸದರಿ ಪ್ರಸ್ತಾವನೆಯೂ ಸಹ ಅಪೂರ್ಣವಾಗಿದ್ದುದರಿಂದ, ಪೂರ್ಣ ಮಾಹಿತಿಯುಳ್ಳ ದಾಖಲೆಗಳೊಂದಿಗೆ ಮರು ಸಲ್ಲಿಸುವಂತೆ ದಿನಾಂಕ 17-11-2020 ರಂದು ಅರಣ್ಯ ಇಲಾಖೆಯಿಂದ ಉಪಯೋಗಿ ಸಂಸ್ಥೆಯವರಿಗೆ ಸೂಚಿಸಲಾಗಿದೆ. |
| ಆ. | ಬಂದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಅನುಮತಿ ನೀಡಲಾಗುವುದು; | ಪೂರ್ಣ ಪ್ರಮಾಣದ ಪ್ರಸ್ತಾವನೆಯು ಸ್ವೀಕೃತವಾದ ನಂತರ ಅರಣ್ಯ (ಸಂರಕ್ಷಣೆ) ಅಧಿನಿಯಮ, 1980ರಡಿ ಹೊರಡಿಸಲಾಗಿರುವ ಮಾರ್ಗಸೂಚಿಗಳನ್ವಯ ಸೂಕ್ತ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಗೆ ಅನುಮೋದನೆ ಕೋರಿ ಕೇಂದ್ರ ಸರ್ಕಾರಕ್ಕೆ ಕಳುಹಿಸಲಾಗುವುದು. |
| ಇ. | ಬೈಂದೂರು ಮೆಸ್ಕಾಂ ಉಪವಿಭಾಗದ ಹೇರೂರಿನಿಂದ ಹಾಲ್ಕಲ್ ತನಕ 33 ಕೆವಿ ಮಾರ್ಗ ವಿಸ್ತರಣೆಯಿಂದ ಎಷ್ಟು ಮರಗಳ ಕಟಾವು ಮಾಡಬೇಕಾಗುತ್ತದೆ? | ಸದರಿ ಪ್ರಸ್ತಾವನೆಗೆ ಕೇಂದ್ರ ಸರ್ಕಾರದಿಂದ ಪೂರ್ವಾನುಮೋದನೆ ಪಡೆದ ನಂತರ ಮರಗಳ ಕಟಾವಣೆಗೆ ಅನುಮತಿ ನೀಡಬಹುದಾಗಿರುತ್ತದೆ. ಉಪಯೋಗಿ ಸಂಸ್ಥೆಯವರು ಉಪ ಅರಣ್ಯ ಸಂರಕ್ಷಣಾಧಿಕಾರಿ, ಕುಂದಾಪುರ ವಿಭಾಗ ಇವರ ಕಛೇರಿಗೆ ಪ್ರಸ್ತಾವನೆ ಸಲ್ಲಿಸಿ, ಯಾವ ಪ್ರದೇಶದಲ್ಲಿ ಎಷ್ಟು ಮರಗಳನ್ನು ಕಡಿಯಬೇಕು ಎನ್ನುವ ಬಗ್ಗೆ ಮರಗಳ ಎಣಿಕೆ ಪಟ್ಟಿಯನ್ನು ತಯಾರಿಸಿದ ನಂತರವೇ ಎಷ್ಟು ಮರಗಳನ್ನು ಕಡಿಯಬೇಕು ಎಂಬ ಬಗ್ಗೆ ನಿರ್ಧರಿಸಬಹುದಾಗಿರುತ್ತದೆ. |

ಸಂಖ್ಯೆ: **ಅಪಜೀ 86 ಎಫ್‌ಎಲ್‌ಎಲ್ 2020 (ಇ)**

**(ಆನಂದ್ ಸಿಂಗ್)**
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 758 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಶಿವಣ್ಣ.ಬಿ. (ಆನೇಕಲ್) |
| 3) | ಉತ್ತರಿಸಬೇಕಾದ ದಿನಾಂಕ | 10/12/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಆನೇಕಲ್ ತಾಲ್ಲೂಕು ಕೇಂದ್ರದಲ್ಲಿ ನಡೆಯುತ್ತಿರುವ ಐ.ಟಿ.ಐ. ಕಾಲೇಜಿಗೆ ಸ್ವಂತ ಕಟ್ಟಡ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಪೂರ್ಣ ಮಾಹಿತಿ ನೀಡುವುದು) | ಬಂದಿದೆ.<br>ಆನೇಕಲ್ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯು ಮೂಲಭೂತ ಸೌಕರ್ಯಗಳನ್ನು ಒಳಗೊಂಡಿರುವ ಎ.ಎಸ್.ಬಿ. ಜ್ಯೂನಿಯರ್ ಕಾಲೇಜ್ ಆನೇಕಲ್ ಆವರಣದಲ್ಲಿರುವ ಬಾಡಿಗೆ ರಹಿತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. |
| ಆ) | ಐ.ಟಿ.ಐ. ಕಾಲೇಜಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು ನಿವೇಶನ ನೀಡುವ ಪ್ರಕ್ರಿಯ ಯಾವ ಹಂತದಲ್ಲಿದೆ; (ಪೂರ್ಣ ಮಾಹಿತಿ ನೀಡುವುದು) | ಐ.ಟಿ.ಐ ಕಾಲೇಜಿಗೆ ಮೂಲಭೂತ ಸೌಕರ್ಯಗಳಿರುವ ಸೂಕ್ತ ನಿವೇಶನ ಒದಗಿಸುವಂತೆ ಈಗಾಗಲೇ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರನ್ನು ಕೋರಲಾಗಿದ್ದು, ತೆಲಗರಹಳ್ಳಿ ಗ್ರಾಮದ ಸ.ನಂ. 11 ರಲ್ಲಿ 2-20 ಎ/ಗುಂಟೆ ಜಮೀನನ್ನು ಮಂಜೂರು ಮಾಡುವ ಸಂಬಂಧ ಪ್ರಸ್ತುತ ಜಿಲ್ಲಾಧಿಕಾರಿಯವರ ಹಂತದಲ್ಲಿ ಬಾಕಿ ಇರುತ್ತದೆ. |
| ಇ) | ಐ.ಟಿ.ಐ ಕಾಲೇಜಿಗೆ ಸ್ವಂತ ಕಟ್ಟಡ ಇಲ್ಲದೇ ಇರುವುದರಿಂದ ಪರಿಣಾಮಕಾರಿ ಬೋಧನೆಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? (ಪೂರ್ಣ ಮಾಹಿತಿ ನೀಡುವುದು) | ಮೂಲಭೂತ ಸೌಕರ್ಯಗಳಿರುವ ಎ.ಎಸ್.ಬಿ. ಜ್ಯೂನಿಯರ್ ಕಾಲೇಜ್ ಆನೇಕಲ್ ಆವರಣದಲ್ಲಿರುವ ಬಾಡಿಗೆ ರಹಿತ ಕಟ್ಟಡದಲ್ಲಿ ತರಬೇತಿದಾರರಿಗೆ ಬೋಧನೆಗೆ ತೊಂದರೆಯಾಗದಂತೆ ಪರಿಣಾಮಕಾರಿಯಾಗಿ ತರಬೇತಿ ನೀಡಲಾಗುತ್ತಿದೆ. ಜಮೀನು ಮಂಜೂರಾದ ಕೂಡಲೇ ಅನುದಾನದ ಲಭ್ಯತೆ ಆಧರಿಸಿ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಪರಿಶೀಲಿಸಲಾಗುವುದು. |

**ಸಂಖ್ಯೆ: ಕೌಉಜೀಇ 68 ಕೈತಪ್ರ 2020**

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 911 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಹೂಲಗೇರಿ.ಡಿ.ಎಸ್. (ಲಿಂಗಸುಗೂರು) |
| 3) | ಉತ್ತರಿಸಬೇಕಾದ ದಿನಾಂಕ | 10/12/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ಹಟ್ಟಿ ಪಟ್ಟಣದಲ್ಲಿ ನೂತನ ಸರ್ಕಾರಿ ಕೈಗಾರಿಕಾ ತರಬೇತಿ ಕೇಂದ್ರ ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | 2014–15 ರಲ್ಲಿ 100 ಮತ್ತು 2017–18 ರಲ್ಲಿ 12 ಒಟ್ಟು 112 ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ರಾಜ್ಯದಲ್ಲಿ ಪ್ರಾರಂಭಿಸಲಾಗಿದೆ. ಪ್ರಸ್ತುತ ಈ ಸಂಸ್ಥೆಗಳಿಗೆ ಡಿ.ಜಿ.ಟಿಯ ನಿಯಮಾನುಸಾರ ಅಗತ್ಯವಿರುವ ಮೂಲಭೂತ ಸೌಲಭ್ಯಗಳಾದ ಯಂತ್ರೋಪಕರಣ, ಸಲಕರಣೆಗಳು, ಪೀಠೋಪಕರಣಗಳು, ಕಟ್ಟಡಗಳು ಹಾಗೂ ಸಿಬ್ಬಂದಿಗಳನ್ನು ಒದಗಿಸುವುದು ಸರ್ಕಾರದ ಸಧ್ಯದ ಆದ್ಯತೆಯಾಗಿರುವುದರಿಂದ ಪ್ರಸಕ್ತ ಸಾಲಿನಲ್ಲಿ ಲಿಂಗಸುಗೂರು ತಾಲ್ಲೂಕಿನ ಹಟ್ಟಿ ಪಟ್ಟಣದಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಕೇಂದ್ರವನ್ನು ಪ್ರಾರಂಭಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ. |
| ಆ) | ಈ ಲಿಂಗಸುಗೂರು ತಾಲ್ಲೂಕಿನ ಮುದಗಲ್ಲ ಪಟ್ಟಣದಲ್ಲಿರುವ ಸರ್ಕಾರಿ ಕೈಗಾರಿಕಾ ತರಬೇತಿ ಕೇಂದ್ರದ ಸ್ವಂತ ಕಟ್ಟಡ ನಿರ್ಮಿಸಲು ಸರ್ಕಾರವು ತೆಗೆದುಕೊಂಡ ಕ್ರಮಗಳೇನು? | ಮುದಗಲ್ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ನಬಾರ್ಡ್ ಆರ್.ಐ.ಡಿ.ಎಫ್–22 ರಡಿಯಲ್ಲಿ ರೂ.129.00 ಲಕ್ಷಗಳ ವೆಚ್ಚದಲ್ಲಿ ಕಟ್ಟಡ ನಿರ್ಮಾಣ ಮಾಡಲು ಕರ್ನಾಟಕ ಗೃಹ ಮಂಡಳಿಗೆ ಅನುಮತಿ ನೀಡಿದ್ದು, ಪ್ರಸ್ತುತ ಲಿಂಟಲ್ ಹಂತದ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |

ಸಂಖ್ಯೆ: ಕೌಉಜೀಇ 67 ಕೈತಪ್ರ 2020

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 899
ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ
ಉತ್ತರಿಸುವ ದಿನಾಂಕ : 10-12-2020
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅರಣ್ಯ ಹಕ್ಕು ಕಾಯ್ದೆಯಡಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಫಲಾನುಭವಿಗಳಿಗೆ ಎಷ್ಟು ಎಕರೆ ಜಮೀನುಗಳನ್ನು ಮಂಜೂರು ಮಾಡಲಾಗಿದೆ(ತಾಲ್ಲೂಕುವಾರು ಫಲಾನುಭವಿಗಳ ಮಾಹಿತಿ ನೀಡುವುದು); | ಚಿಕ್ಕಮಗಳೂರು ಜಿಲ್ಲೆಯಲ್ಲಿ ಅರಣ್ಯ ಹಕ್ಕು ಕಾಯ್ದೆಯಡಿ ಮಂಜೂರು ಮಾಡಿದ ಅರ್ಜಿಗಳ ವಿವರ ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ ನೋಡಿ) |

| ಕ್ಲೇಮುದಾರರ ವಿವರ | ಸ್ವೀಕೃತಗೊಂಡ ಅರ್ಜಿಗಳ ಸಂಖ್ಯೆ | ವಿತರಿಸಿರುವ ಹಕ್ಕು ಪತ್ರಗಳ ಸಂಖ್ಯೆ | ಮಂಜೂರು ಮಾಡಿರುವ ಭೂಮಿ ವಿವರ (ಎಕರೆಗಳಲ್ಲಿ) | ತಿರಸ್ಕೃತಗೊಂಡಿರುವ ಅರ್ಜಿಗಳ ಸಂಖ್ಯೆ | ಇತ್ಯರ್ಥವಾಗದೆ ಬಾಕಿ ಇರುವ ಅರ್ಜಿಗಳ ಸಂಖ್ಯೆ |
|---|---|---|---|---|---|
| ಪರಿಶಿಷ್ಟ ಪಂಗಡ | 3653 | 1908 | 2783.01 | 1745 | 0 |
| ಇತರೆ ಪಾರಂಪರಿಕ ಅರಣ್ಯ ವಾಸಿಗಳು | 17560 | 0 | 0 | 17560 | 0 |
| ಸಮುದಾಯ ಹಕ್ಕುಗಳು | 100 | 3 | 1410 | 97 | 0 |
| ಒಟ್ಟು | 21313 | 1911 | 4193.01 | 19402 | 0 |

ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಅರಣ್ಯ ಹಕ್ಕು ಕಾಯ್ದೆಯಡಿ ಹಕ್ಕು ಪತ್ರ ವಿತರಿಸಿದ ಫಲಾನುಭವಿಗಳ ವಿವರ ಕೆಳಕಂಡಂತಿದೆ.

| | |
|---|---|
| 2017-2018 | ಯಾವುದೇ ಅರ್ಜಿ ಮಂಜೂರು ಮಾಡಿರುವುದಿಲ್ಲ. |
| 2018-2019 | ಯಾವುದೇ ಅರ್ಜಿ ಮಂಜೂರು ಮಾಡಿರುವುದಿಲ್ಲ. |

| | | | |
|---|---|---|---|
| | | 2019–2020 | 1. ಚಿಕ್ಕಮಗಳೂರು ತಾ ॥ ಶ್ರೀಮಂತ ಬಿನ್ ದಾದಣ್ಣ (ಪ.ವ) ಬಿಂಡಿಗಗ್ರಾಮ, ಹಕ್ಕಿಪಿಕ್ಕಿ ಕಾಲೋನಿ ಮಲ್ಲೇನಹಳ್ಳಿ, ಚಿಕ್ಕಮಗಳೂರು ಸರ್ವೆ ನಂ 1 ವಿಸ್ತೀರ್ಣ 1.10 ಎಕರೆ<br>2. ಚಿಕ್ಕಮಗಳೂರು ತಾ ॥ ರಾಜು ಬಿನ್ ಶ್ರೀಮಂತ, (ಪ.ವ) ಬಿಂಡಿಗಗ್ರಾಮ, ಹಕ್ಕಿಪಿಕ್ಕಿ ಕಾಲೋನಿ ಮಲ್ಲೇನಹಳ್ಳಿ, ಚಿಕ್ಕಮಗಳೂರು ಸರ್ವೆ ನಂ 1. ವಿಸ್ತೀರ್ಣ 2.10 ಎಕರೆ<br>3. ಕೊಪ್ಪ, ತಾಲ್ಲೂಕು ಈ ಕೃಷ್ಣಮೂರ್ತಿ ಬಿನ್ ಗೋಪು, (ಪ.ವ) ಚಾವಲ್ಮನೆ, ಹಾಲ್ಮಾತ್ತೂರು ಅಂಚೆ, ಹರಿಹರಪುರ, ಕೊಪ್ಪ, ತಾಲ್ಲೂಕು ಸರ್ವೆ ನಂ 265 ವಿಸ್ತೀರ್ಣ 1.20 ಎಕರೆ<br>4. ನ.ರಾ ಪುರ ವಿಜಯ ಬಿನ್ ಚನ್ನ (ಪ.ವ) ಹರಾವರಿ ಗ್ರಾಮ ಕಾನೂರು ಗ್ರಾಮ ಪಂಚಾಯಿತಿ, ಸರ್ವೆ ನಂ 156 ವಿಸ್ತೀರ್ಣ 0.36 ಎಕರೆ<br>5. ನ.ರಾ ಪುರ ತಾಲ್ಲೂಕು ಶಾರದ ಕೋಂ ಚನ್ನ (ಪ.ವ) ಹರಾವರಿ ಗ್ರಾಮ ಕಾನೂರು ಗ್ರಾಮ ಪಂಚಾಯಿತಿ, ಸರ್ವೆ ನಂ 156 ಎಕರೆ. |
| ಆ) | ಅರಣ್ಯ ಹಕ್ಕು ಕಾಯ್ದೆಯಡಿ ಸಾಗುವಳಿದಾರರಿಗೆ ಸರ್ಕಾರ ನಿಗದಿಪಡಿಸಿರುವ ಮಾನದಂಡಗಳೇನು (ಸರ್ಕಾರಿ ಆದೇಶದೊಂದಿಗೆ ವಿವರ ನೀಡುವುದು); | ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ 2006 (2007ರ2) ಮತ್ತು 2008 ತಿದ್ದುಪಡಿ ನಿಯಮಗಳು 2012ರಡಿ<br>1. 2005ರ ಡಿಸೆಂಬರ್ 13ಕ್ಕೆ ಮುಂಚೆ ಪ್ರಧಾನವಾಗಿ ಅರಣ್ಯಗಳಲ್ಲಿ ವಾಸಿಸಿದ ಮತ್ತು ವಾಸ್ತವಿಕ ಜೀವನೋಪಾಯದ ಅವಶ್ಯಕತೆಗಳಿಗಾಗಿ ಅರಣ್ಯದ ಅಥವಾ ಅರಣ್ಯಗಳ ಜಮೀನಿನ ಮೇಲೆ ಅವಲಂಬಿತವಾಗಿರುವ ಅನುಸೂಚಿತ ಬುಡಕಟ್ಟು ಜನರು.<br>2. ಇತರ ಪಾರಂಪರಿಕ ಅರಣ್ಯವಾಸಿಗಳು ಎಂದರೆ 2005ರ ಡಿಸೆಂಬರ್ 13 ಕ್ಕಿಂತಲೂ ಮುಂಚೆ ಕೊನೆ ಪಕ್ಷ ಮೂರು ತಲೆಮಾರಿನವರೆಗೆ ಪ್ರಧಾನವಾಗಿ ಅರಣ್ಯಗಳಲ್ಲಿ ವಾಸಿಸಿದ ಮತ್ತು ವಾಸ್ತವಿಕ ಜೀವನೋಪಾಯದ ಅವಶ್ಯಕತೆಗಳಿಗಾಗಿ ಅರಣ್ಯದ ಅಥವಾ ಅರಣ್ಯಗಳ ಜಮೀನಿನ ಮೇಲೆ ಅವಲಂಬಿತವಾಗಿರುವ ಯಾವುದೇ ವ್ಯಕ್ತಿ ಅಥವಾ ಯಾವುದೇ ಸಮುದಾಯದವರನ್ನು ಅರ್ಹರೆಂದು ಪರಿಗಣಿಸಲಾಗುವುದು ನಿಗಧಿತ ದಾಖಲೆ ಹಾಗೂ ಪುರವೆಗಳನ್ನು ಒದಗಿಸತಕ್ಕದ್ದು.<br>ವಿವರಣೆ: ಈ ಖಂಡದ ಉದ್ದೇಶಕ್ಕಾಗಿ "ತಲೆಮಾರು" ಎಂದರೆ, ಇಪ್ಪತ್ತೈದು ವರ್ಷಗಳನ್ನು ಒಳಗೊಂಡಿರುವ ಒಂದು ಅವಧಿ. | |
| ಇ) | ಕಾಯ್ದೆಯಡಿ ಗರಿಷ್ಟ 10 ಎಕರೆ ಮಿತಿಯನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಸರ್ಕಾರದ ಗಮನಕ್ಕೆ ಇಂತಹ ಯಾವುದೇ ಪ್ರಸ್ತಾವನೆ ಬಂದಿರುವುದಿಲ್ಲ | |

ಸಕಇ 378 ಎಸ್‌ಟಿಪಿ 2020

(ಬಿ.ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 909 |
| ಸದಸ್ಯರ ಹೆಸರು | : | ಶ್ರೀ ವೆಂಕಟ್‌ರಾವ್ ನಾಡಗೌಡ |
| ಉತ್ತರಿಸುವ ದಿನಾಂಕ | : | 10.12.2020 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಿಂಧನೂರು ತಾಲ್ಲೂಕಿನಲ್ಲಿ ಬಂಗಾಳಿ ನಿರಾಶ್ರಿತರು ಹಲವಾರು ವರ್ಷಗಳಿಂದ ನೆಲೆಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಬಂದಿದ್ದಲ್ಲಿ, ಅವರುಗಳು ಬಂಗಾಳದಲ್ಲಿ ನಮಸೂದ್ರು ಜಾತಿಗೆ ಸೇರಿದವರಾಗಿದ್ದು, ಪರಿಶಿಷ್ಟ ಜಾತಿ ಸಮುದಾಯದವರಾಗಿರುತ್ತಾರೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಇ) | ರಾಜ್ಯದಲ್ಲಿ ಸದರಿ ನಿರಾಶ್ರಿತರನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸುವ ಪ್ರಸ್ತಾವವು ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವಾಗ ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸಲಾಗುವುದು? | ಯಾವುದೇ ಜಾತಿಯನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸಲು ಭಾರತ ಸರ್ಕಾರಕ್ಕೆ ಮಾತ್ರ ಅಧಿಕಾರವಿರುತ್ತದೆ. ಸದರಿ ಬಂಗಾಳಿ ನಿರಾಶ್ರಿತರನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸುವ ಬಗ್ಗೆ ಈಗಾಗಲೇ ದಿನಾಂಕ:27.05.2017ರಂದು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗಿತ್ತು. ಈ ಸಂಬಂಧ ರಿಜಿಸ್ಟ್ರಾರ್ ಜನರಲ್ ಆಫ್ ಇಂಡಿಯಾ ರವರು ಪರಿಶೀಲನಾ ಅಂಶಗಳಿಗೆ ಸಮರ್ಥನೆಯನ್ನು ಕೋರಿದ್ದು, ಕೇಂದ್ರ ಸರ್ಕಾರವು ರಾಜ್ಯದಿಂದ ಈ ಅಂಶಗಳಿಗೆ ವರದಿ/ಸಮರ್ಥನೆ ಕೋರಿರುತ್ತದೆ. ಈ ಕುರಿತು ಡಾ॥ ಬಿ.ಆರ್.ಅಂಬೇಡ್ಕರ್ ಸಂಶೋಧನಾ ಸಂಸ್ಥೆ, ಬೆಂಗಳೂರು ಇವರಿಗೆ ಪತ್ರ ಬರೆದು ಸದರಿ ಅಂಶಗಳಿಗೆ ವರದಿ/ಸಮರ್ಥನೆಯನ್ನು ನೀಡುವಂತೆ ಕೋರಲಾಗಿದೆ. ವರದಿಯನ್ನು ನಿರೀಕ್ಷಿಸಲಾಗಿದೆ. |

ಸಕಇ 272 ಎಸ್‌ಎಡಿ 2020

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 906
2. ವಿಧಾನ ಸಭೆ ಸದಸ್ಯರ ಹೆಸರು : ಡಾ|| ರಂಗನಾಥ್ ಹೆಚ್.ಡಿ (ಕುಣಿಗಲ್)
3. ಉತ್ತರಿಸುವ ದಿನಾಂಕ : 10-12-2020
4. ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಮನಗರ ಜಿಲ್ಲೆ ಬಿಡದಿಯಲ್ಲಿರುವ ಟೋಯೋಟಾ ಕಂಪನಿಯ ಲಾಕ್‌ಔಟ್ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು |
| ಆ | ಟೋಯೋಟಾ ಕಂಪನಿಯ ಆಡಳಿತ ಮಂಡಳಿಯು ಮಾನವ ಹಕ್ಕುಗಳ ಉಲ್ಲಂಘನೆ ಹಾಗೂ ಸಂವಿಧಾನಧ ಹಕ್ಕನ್ನು ಉಲ್ಲಂಘನೆ ಮಾಡುವುದರ ಮೂಲಕ ನೌಕರರಿಗೆ ನೀಡುತ್ತಿರುವ ಕಿರುಕುಳದ ಕುರಿತು ಅಲ್ಲಿನ ನೌಕರರ ಸಂಘವು ಸರ್ಕಾರದ ಗಮನ ಸೆಳೆದಿದೆಯೇ? | ಆಡಳಿತ ಮಂಡಳಿಯು ಮಾನವ ಹಕ್ಕುಗಳ ಉಲ್ಲಂಘನೆ ಹಾಗೂ ಸಂವಿಧಾನದ ಹಕ್ಕನ್ನು ಉಲ್ಲಂಘನೆ ಮಾಡುವುದರ ಮೂಲಕ ನೌಕರರಿಗೆ ನೀಡುತ್ತಿರುವುದರ ಕಿರುಕುಳದ ಕುರಿತು ಅಲ್ಲಿನ ನೌಕರರ ಸಂಘವು ಸರ್ಕಾರದ ಗಮನ ಸೆಳೆದಿರುವುದಿಲ್ಲ. ಆದರೆ ದಿನಾಂಕ: 15-10-2020 ರಲ್ಲಿ ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಉತ್ಪಾದನೆಯಲ್ಲಿ ತೊಡಗಿರುವ ಕಾರ್ಮಿಕರ ಸಮಸ್ಯೆಗಳ ಬಗ್ಗೆ ತಿಳಿಸಿದ್ದು, ಮನವಿಯಲ್ಲಿರುವ ಅಂಶಗಳ ಬಗ್ಗೆ ಕ್ರಮ ವಹಿಸಲಾಗಿದೆ. |
| ಇ | ಟೋಯೋಟಾ ಕಂಪನಿಯ ಆಡಳಿತ ಮಂಡಳಿಯು ನೌಕಕರಿಗೆ ನೀಡುತ್ತಿರುವ Time Target ಹಾಗೂ ನಿಗಧಿಪಡಿಸಿರುವ Production System ಗಳು ರಾಜ್ಯ ಹಾಗೂ ಕೇಂದ್ರ ಸರ್ಕಾರದ ನೀತಿಗಳಿಗೆ ಅನುಗುಣವಾಗಿದಯೇ ಹಾಗೂ ಈ ವಿಷಯಗಳಲ್ಲಿ ಕಂಪನಿಯು ರಾಜ್ಯ/ಕೇಂದ್ರ ಸರ್ಕಾರದಿಂದ ಅನುಮತಿ ಪಡೆದಿದೆಯೇ? | ಕಾರ್ಮಿಕ ಇಲಾಖೆಯು Time Target ಹಾಗೂ Production System ಗಳ ಬಗ್ಗೆ ಯಾವುದೇ ನೀತಿ ರೂಪಿಸಿರುವುದಿಲ್ಲ. ಈ ವಿಷಯವನ್ನು ಆಡಳಿತವರ್ಗ ಮತ್ತು ಕಾರ್ಮಿಕ ವರ್ಗ ಪರಸ್ಪರ ಮಾತುಕತೆ ಮೂಲಕ ಒಪ್ಪಂದ ಮಾಡಿಕೊಳ್ಳುತ್ತಾರೆ. |
| ಈ | ಟೋಯೋಟಾ ಕಂಪನಿಯ ನೌಕರರಿಗೆ ಅಳವಡಿಸಿರುವ ವಿ.ಎಸ್.ಎಸ್ ಯೋಜನೆಯು ರಾಜ್ಯ ಮತ್ತು ಕೇಂದ್ರ ಸರ್ಕಾರದ ನೀತಿಗೆ ಅನುಕೂಲವಾಗಿದೆಯೇ? | ಖಾಸಗಿ ವಲಯಕ್ಕೆ ಸಂಬಂಧಿಸಿದ ಕಂಪನಿಗಳು ವಿ.ಎಸ್.ಎಸ್ ಆಳವಡಿಸುವ ಕುರಿತು ಯಾವುದೇ ನೀತಿ ಇರುವುದಿಲ್ಲ. |
| ಉ | ನೌಕರರುಗಳಿಗೆ ಹೆಚ್ಚಿನ ಒತ್ತಡ ಹೇರಿಕೆ, ವೈದ್ಯಕೀಯ ಸೌಲಭ್ಯ ನಿರಾಕರಣೆ, ಬಲವಂತದ ವಿ.ಎಸ್.ಎಸ್ ಯೋಜನೆ ಜಾರಿ ಮೂಲಕ ಕಂಪನಿಯು ನೌಕರರುಗಳಿಗೆ ಕಿರುಕುಳ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು.<br>ಈ ಬಗ್ಗೆ ನಡೆಸಿದ ಸಂಧಾನವು ವಿಫಲವಾದ್ದರಿಂದ ಈ ವಿವಾದವನ್ನು ನ್ಯಾಯ ನಿರ್ಣಯಕ್ಕಾಗಿ ಸರ್ಕಾರದ ಆದೇಶ ಸಂಖ್ಯೆ: ಕಾಇ 411 ಐಡಿಎಂ 2020 ದಿನಾಂಕ: 19.11.2020 ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ರಾಮನಗರ ಇಲ್ಲಿಗೆ ಶಿಫಾರಸ್ಸು ಮಾಡಲಾಗಿದೆ. |

| | | |
|---|---|---|
| | | ಕಂಪನಿಯು ನೌಕರರಿಗೆ ವೈದ್ಯಕೀಯ ಸೌಲಭ್ಯ ನಿರಾಕರಣೆಯ ಬಗ್ಗೆ ಯಾವುದೇ ಕಾರ್ಮಿಕರು ಕಾರ್ಮಿಕ ಇಲಾಖೆಯ ಮುಂದೆ ವಿವಾದವನ್ನು ಎತ್ತಿರುವುದಿಲ್ಲ.<br>ಕಂಪನಿಯು ನೌಕರರಿಗೆ ವಿ.ಎಸ್.ಎಸ್ ಯೋಜನೆ ಅಳವಡಿಸಿರುವ ಬಗ್ಗೆ ಸರ್ಕಾರಕ್ಕೆ ಯಾವುದೇ ಮಾಹಿತಿ ನೀಡಿರುವುದಿಲ್ಲ. |
| ಊ | ತೊಂದರೆಗೊಳಗಾದ ನೌಕರರುಗಳ ಬೇಡಿಕೆ ಈಡೇರಿಕೆ ಸಂಬಂಧ ಸರ್ಕಾರ ಹಾಗೂ ಕಂಪನಿ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ನೌಕರರ ದೂರು ಅರ್ಜಿಯ ಬಗ್ಗೆ ಅಪರ ಕಾರ್ಮಿಕ ಆಯುಕ್ತರು (ಕೈಗಾರಿಕಾ ಬಾಂಧವ್ಯ), ಕಾರ್ಮಿಕ ಇಲಾಖೆ ಇವರು ಹಲವಾರು ಸಂಧಾನ ಸಭೆಗಳನ್ನು ನಡೆಸಿ, ಸಂಧಾನ ವಿಫಲವಾದ್ದರಿಂದ, ನೌಕರರ ಬೇಡಿಕೆಗಳನ್ನು ನ್ಯಾಯ ನಿರ್ಣಯಕ್ಕಾಗಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ರಾಮನಗರ ಇಲ್ಲಿಗೆ ದಿನಾಂಕ:19-11-2020 ರಂದು ಶಿಫಾರಸ್ಸು ಮಾಡಲಾಗಿದೆ.<br>ನೌಕರರು ಹೂಡಿರುವ ಮುಷ್ಕರ ಹಾಗೂ ಆಡಳಿತವರ್ಗದರು ಘೋಷಿಸಿರುವ ಲಾಕ್ಔಟ್ ಅನ್ನು ನಿಷೇಧಿಸಿ ಸರ್ಕಾರದ ಆದೇಶ ಸಂಖ್ಯೆ: ಕಾಇ 411 ಐಡಿಎಂ 2020 ದಿನಾಂಕ:18.11.2020 ರಲ್ಲಿ ಆದೇಶ ಹೊರಡಿಸಲಾಗಿರುತ್ತದೆ. |

**ಸಂಖ್ಯೆ: ಕಾಇ 429 ಐಡಿಎಂ 2020**

(ಅರಬೈಲ್ ಶಿವರಾಮ್ ಹೆಬ್ಬಾರ್)
ಕಾರ್ಮಿಕ & ಸಕ್ಕರೆ ಸಚಿವರು.

# TOYOTA KIRLOSKAR MOTOR EMPLOYEES UNION

Plot No. 1, Bidadi Industrial Area, Ramanagar Dist., Pin - 562 109

Regd. No. ಸಕಟಿಂ. 4 / ಡಿಆರ್‌ಟಿ / 3 / 2001-02

Prasanna 9916702111

D.M. Diracowsa Katakole 9740900485

ಇವರಿಗೆ,

ಶ್ರೀ ಶಿವರಾಮ್ ಹೆಬ್ಬಾರ್ ರವರು
ಮಾನ್ಯ ಕಾರ್ಮಿಕ ಸಚಿವರು,
ಕರ್ನಾಟಕ ಸರ್ಕಾರ.

ದಿನಾಂಕ:–15.10.2020

ಮಾನ್ಯರೆ,

ವಿಷಯ:– ಟೊಯೋಟ ಆಡಳಿತ ಮಂಡಳಿಯವರ ಕಾನೂನು ಬಾಹಿರ ಹಾಗೂ ಅಮಾನವೀಯ ನಡವಳಿಕೆಗಳ ಬಗ್ಗೆ,

ಟೊಯೋಟ ಕಿರ್ಲೋಸ್ಕರ್ ಮೋಟಾರ್ ಸಂಸ್ಥೆಯು ಕಾರು ತಯಾರಿಕಾ ಸಂಸ್ಥೆಯಾಗಿದ್ದು, ಬಿಡದಿಯಲ್ಲಿ ತನ್ನ ಕಾರ್ಖಾನೆಯನ್ನು ಹೊಂದಿರುತ್ತದೆ. ಇಲ್ಲಿ 3500 ಕಾರ್ಮಿಕರು ಸೇರಿದಂತೆ ಗುತ್ತಿಗೆ, ಅರೆಕಾಲಿಕ ಸೇರಿದಂತೆ ಸುಮಾರು 10,000. ಉದ್ಯೋಗಿಗಳು ಕೆಲಸ ನಿರ್ವಹಿಸುತ್ತಿದ್ದಾರೆ. ಸಂಸ್ಥೆಯಲ್ಲಿ ಕಾರುಗಳ ಉತ್ಪಾದನೆಯು ನಿರಂತರ Conveyor Line ನಲ್ಲಿ ನಡೆಯುತ್ತದೆ. ಪ್ರತಿದಿನ ನಿರಂತರವಾಗಿ 8.30 ಗಂಟೆಗಳ ಕಾಲ ಕಾರ್ಮಿಕರು ಕೆಲಸ ಮಾಡುವುದು ನಿಯಮವಾಗಿದೆ. ಈ ರೀತಿ ಕೆಲಸ ಮಾಡುವಾಗ ಮನುಷ್ಯರ ಸಾಮರ್ಥ್ಯ, ಅವಶ್ಯಕತೆಗಳನ್ನು ಅರ್ಥ ಮಾಡಿಕೊಂಡು ವೈಜ್ಞಾನಿಕವಾಗಿ ಕೆಲಸವನ್ನು ನಿಗದಿ ಮಾಡಬೇಕಾಗುತ್ತದೆ. ಆದರೆ ಟೊಯೋಟ ಆಡಳಿತ ಮಂಡಳಿಯವರು ಉತ್ಪಾದನಾ ವಿಭಾಗಗಳಲ್ಲಿ ಕೆಲಸ ಮಾಡುವ ಕಾರ್ಮಿಕರನ್ನು ಅಮಾನವೀಯವಾಗಿ ನಡೆಸಿಕೊಳ್ಳುತ್ತಿದ್ದಾರೆ.

- ಕೊರೊನ ಸಂಕಷ್ಟದ ಸಮಯದಲ್ಲಿ ಪರಿಸ್ಥಿತಿಯ ದುರ್ಬಳಕೆ ಮಾಡಿಕೊಂಡು ಹೊಸ ನಿಯಮಗಳ ಹೆಸರಿನಲ್ಲಿ ಆಡಳಿತ ಮಂಡಳಿಯವರು ಕಾರ್ಮಿಕರನ್ನು ಶೋಷಿಸುತ್ತಿದ್ದಾರೆ. ಕಾರುಗಳ ಉತ್ಪಾದನೆಯಲ್ಲಿ ನೇರವಾಗಿ ತೊಡಗುವ ಪ್ರತಿ ಕಾರ್ಮಿಕನು ಮಾಡಬೇಕಾದ ಕೆಲಸವನ್ನು "ಮಿಲಿ ಸೆಕೆಂಡ್" ಗಳನ್ನು ಬಳಸಿ ನಿಗದಿಮಾಡಲಾಗುತ್ತದೆ. ಇದು ಅವೈಜ್ಞಾನಿಕ ಕ್ರಮವಾಗಿರುತ್ತದೆ.

- ನೇರವಾಗಿ ಉತ್ಪಾದನೆಯಲ್ಲಿ ತೊಡಗಿರುವ ಕಾರ್ಮಿಕರು ನೈಸರ್ಗಿಕ ಕರೆಗಳಿಗೆ ಶೌಚಾಲಯಕ್ಕೆ ಹೋಗಲು ಸಹ ಸಮಯ ನಿರ್ಬಂಧಿಸುವುದು, ಶೌಚಾಲಯಕ್ಕೆ ಹೋಗಿ

ಬಂದ ಸಮಯಕ್ಕೆ ಸಂಬಳ ಕಡಿತ ಮಾಡುವುದು, ಸಂಬಳ ಕಡಿತ ಮಾಡುವದರ ಜೊತೆಗೆ ನಿಯಮಬಾಹಿರವಾಗಿ ಕೆಲಸದ ಸ್ಥಳದಿಂದ ತಪ್ಪಿಸಿಕೊಂಡಿದ್ದೀರಿ ಎಂದು ನೋಟಿಸ್ ನೀಡಿ ದೋಷಾರೋಪ ಪಟ್ಟಿ (Charge Sheets) ನೀಡುವುದನ್ನು ಆಡಳಿತ ಮಂಡಳಿಯವರು ಮಾಡುತ್ತಿದ್ದಾರೆ.

- ಕೆಲವು ಸಂದರ್ಭಗಳಲ್ಲಿ ಮಾರುಕಟ್ಟೆಯ ಬೇಡಿಕೆಗಳಿಗೆ ಅನುಗುಣವಾಗಿ ಕೆಲಸದ ದಿನಗಳನ್ನು ಕ್ಯಾಲೇಂಡರ್ ದಿನಗಳನ್ನು ಬದಲಾಯಿಸಿ ವಾರಕ್ಕೆ 48 ಗಂಟೆಗಳನ್ನು ಮೀರಬಾರದು ಎನ್ನುವ ಕಾನೂನಿಗೆ ವಿರುದ್ಧವಾಗಿ ಕೆಲಸ ಮಾಡಿಸಲು ಪ್ರಯತ್ನಿಸುತ್ತಿದ್ದಾರೆ. ಈ ರೀತಿಯ ಕೆಲಸದ ದಿನಗಳನ್ನು ಕಾರ್ಮಿಕರು ಕೆಲಸಕ್ಕೆ ಬಂದಿಲ್ಲವೆಂದು ಅನಧೀಕೃತ ರಜೆ ಎಂದು (Unauthorized Absence) ಎಂದು ನಮೂದಿಸುತ್ತಿದ್ದಾರೆ ಇದನ್ನೆ ಪರಿಗಣಿಸಿ ಸಂಬಳ ಕಡಿತ ಮಾಡುತ್ತಿದ್ದಾರೆ ಹಾಗೂ UA ಗಳಿಗೆ ಚಾರ್ಜ್ ಶೀಟುಗಳನ್ನು ನೀಡುತ್ತಿದ್ದಾರೆ.

- ಕಾರ್ಮಿಕರು ತುರ್ತು ಸಂದರ್ಭದಲ್ಲಿ ಹಾಗೂ ಅವಶ್ಯಕತೆಯಿದ್ದಾಗ ಮಾಹಿತಿ ನೀಡಿ ರಜೆ ತೆಗೆದುಕೊಳ್ಳಲು ಅವಕಾಶ ನೀಡುತ್ತಿಲ್ಲ, ಹಲವಾರು ಸಂದರ್ಭಗಳಲ್ಲಿ ಕಾರ್ಮಿಕರು ರಜೆಗಳನ್ನು ಅನಧೀಕೃತ ರಜೆ (UA) ಎಂದು ಸಂಬಳ ಕಡಿತ ಮಾಡುತ್ತಿದ್ದಾರೆ. ಅವರ ಖಾತೆಯಲ್ಲಿರುವ ರಜೆಗಳನ್ನು ಪಡೆಯಲು ಸಹ ಅವಕಾಶವಿಲ್ಲದಂತೆ ನಿರ್ಬಂಧಿಸುತ್ತಿದ್ದಾರೆ.

ತಾವುಗಳು ಈ ಕೂಡಲೆ ಮಧ್ಯಪ್ರವೇಶಿಸಿ ಟೊಯೋಟ ಆಡಳಿತಮಂಡಳಿಯವರ ಅಮಾನವೀಯ, ಅವೈಜ್ಞಾನಿಕ ಕ್ರಮಗಳನ್ನು ತಡೆಯಲು ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕೆಂದು ಮನವಿ ಮಾಡುತ್ತಿದ್ದೇವೆ.

ವಂದನೆಗಳೊಂದಿಗೆ.

ಇಂತಿ

ಅಧ್ಯಕ್ಷರು

ಟೊ ಕಿ ಮೊ ಕಾರ್ಮಿಕ ಸಂಘ.

## ಕರ್ನಾಟಕ ಸರ್ಕಾರ

ಸಂಖ್ಯೆ: LD-IDM/411/2020-LS-DO-6

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು, ದಿನಾಂಕ: 18/11/2020

### ಆದೇಶ

ಟೊಯೋಟಾ ಕಿರ್ಲೋಸ್ಕರ್ ಮೋಟಾರ್ಸ್ ಎಂಪ್ಲಾಯಿಸ್ ಯೂನಿಯನ್, ಪ್ಲಾಟ್ ನಂ. 01, ಬಿಡದಿ ಕೈಗಾರಿಕಾ ಪ್ರದೇಶ ಬಿಡದಿ, ರಾಮನಗರ ಜಿಲ್ಲೆ, ಕಾರ್ಮಿಕ ಸಂಘದಿಂದ ಪ್ರತಿನಿಧಿಸಲ್ಪಡುವ ಸುಮಾರು 3500 ಜನ ಕಾರ್ಮಿಕರು ದಿನಾಂಕ: 09.11.2020 ರಂದು ಮುಷ್ಕರ ಹೂಡಿರುವ ಬಗ್ಗೆ ಟೊಯೋಟಾ ಕಿರ್ಲೋಸ್ಕರ್ ಮೋಟಾರ್ಸ್ ಲಿಮಿಟೆಡ್, ಪ್ಲಾಟ್ ನಂ. 01, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ, ಸಂಸ್ಥೆಯ ಆಡಳಿತ ವರ್ಗದವರು ಸಲ್ಲಿಸಿರುವ ದೂರಿನ ಬಗ್ಗೆ ಹಾಗೂ ಕಾರ್ಮಿಕ ಸಂಘದವರ ವಿವಿಧ ಬೇಡಿಕೆಗಳ ಬಗ್ಗೆ ಕೈಗಾರಿಕಾ ವಿವಾದವಿರುವುದಾಗಿ, ಕರ್ನಾಟಕ ಸರ್ಕಾರವು ಅಭಿಪ್ರಾಯ ಪಟ್ಟಿರುವುದರಿಂದ, ಕೈಗಾರಿಕಾ ವಿವಾದ ಕಾಯ್ದೆ 1947 ಕಲಂ 10(3) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಟೊಯೋಟಾ ಕಿರ್ಲೋಸ್ಕರ್ ಮೋಟಾರ್ಸ್ ಎಂಪ್ಲಾಯಿಸ್ ಯೂನಿಯನ್ ಪ್ಲಾಟ್ ನಂ. 01, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ, ಇವರಿಂದ ಪ್ರತಿನಿಧಿಸಲ್ಪಡುವ ಕಾರ್ಮಿಕರು ದಿನಾಂಕ: 09.11.2020 ರಿಂದ ಹೂಡಿರುವ ಮುಷ್ಕರವನ್ನು ಕೂಡಲೇ ಜಾರಿಗೆ ಬರುವಂತೆ ನಿಷೇಧಿಸಿದೆ.

ಹಾಗೂ

ಆಡಳಿತ ವರ್ಗದವರಾದ ಟೊಯೋಟಾ ಕಿರ್ಲೋಸ್ಕರ್ ಮೋಟಾರ್ಸ್ ಲಿಮಿಟೆಡ್, ಪ್ಲಾಟ್ ನಂ. 01, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ, ಇವರು ದಿನಾಂಕ: 10.11.2020 ರಿಂದ ಲಾಕ್‌ಔಟ್ ಘೋಷಣೆ ಮಾಡಿರುವುದರ ಬಗ್ಗೆ ಕೈಗಾರಿಕಾ ವಿವಾದ ಕಾಯ್ದೆ 1947 ಕಲಂ 10(3) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಟೊಯೋಟಾ ಕಿರ್ಲೋಸ್ಕರ್ ಮೋಟಾರ್ಸ್ ಲಿಮಿಟೆಡ್, ಪ್ಲಾಟ್ ನಂ. 01, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ, ಇವರು ದಿನಾಂಕ: 10.11.2020 ರಿಂದ ಲಾಕ್‌ಔಟ್ ಘೋಷಿಸಿ ಮುಂದುವರೆಸುತ್ತಿರುವ ಲಾಕ್‌ಔಟ್ ಅನ್ನು ಕೂಡಲೇ ಜಾರಿಗೆ ಬರುವಂತೆ ನಿಷೇಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು
ಅವರ ಹೆಸರಿನಲ್ಲಿ

(ಡಾ. ರಾಜ್ ಕುಮಾರ್ ಖತ್ರಿ)
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

ಇವರಿಗೆ,

1. ಆಡಳಿತವರ್ಗ: ಟೊಯೋಟಾ ಕಿರ್ಲೋಸ್ಕರ್ ಮೋಟಾರ್ಸ್ ಲಿಮಿಟೆಡ್, ಪ್ಲಾಟ್ ನಂ. 01, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ,
2. ಟೊಯೋಟಾ ಕಿರ್ಲೋಸ್ಕರ್ ಮೋಟಾರ್ಸ್ ಎಂಪ್ಲಾಯಿಸ್ ಯೂನಿಯನ್ ಪ್ಲಾಟ್ ನಂ. 01, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ,

ಪ್ರತಿಯನ್ನು:

1. ಕಾರ್ಮಿಕ ಆಯುಕ್ತರು, ಕಾರ್ಮಿಕ ಇಲಾಖೆ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29 ಇವರ ಪತ್ರ ಸಂಖ್ಯೆ: ಐಡಿಎ-1/ಸಿಆರ್-57/2020-21 ದಿನಾಂಕ: 18.11.2020 ಕ್ಕೆ ಉಲ್ಲೇಖಿಸಿದೆ.
2. ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ.
3. ಪೋಲೀಸ್ ವರಿಷ್ಠಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ.
4. ಕಛೇರಿ ಪ್ರತಿ.

## ಕರ್ನಾಟಕ ಸರ್ಕಾರ

ಸಂಖ್ಯೆ: LD-IDM/411/2020-LD-DO-6

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:19.11.2020.

### ಆದೇಶ

ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಲಿಮಿಟೆಡ್, ಪ್ಲಾಟ್ ನಂ.1, ಬಿಡದಿ, ರಾಮನಗರ ಜಿಲ್ಲೆ, ಕಾರ್ಮಿಕ ಸಂಘದಿಂದ ಪ್ರತಿನಿಧಿಸಲ್ಪಡುವ ಸುಮಾರು 3500 ಜನ ಕಾರ್ಮಿಕರು ದಿನಾಂಕ: 09.11.2020 ರಂದು ಮುಷ್ಕರ ಹೂಡಿರುವುದು ಹಾಗೂ ಕಾರ್ಮಿಕರು ಮುಷ್ಕರ ಹೂಡಿರುವುದಕ್ಕೆ ಪ್ರತಿಯಾಗಿ ಆಡಳಿತವರ್ಗದವರು ದಿನಾಂಕ: 10.11.2020 ರಿಂದ ಸಂಸ್ಥೆಗೆ ಲಾಕ್-ಔಟ್ ಘೋಷಿಸಿರುವುದು ಹಾಗೂ ಕಾರ್ಮಿಕರ ಬೇಡಿಕೆಗಳ ಬಗ್ಗೆ ಉಂಟಾದ ಕೈಗಾರಿಕಾ ವಿವಾದ. ಇವರ ಮಧ್ಯೆ ಈ ಕೆಳಕಂಡ ಅಂಶಗಳ ಬಗ್ಗೆ ಕೈಗಾರಿಕಾ ವಿವಾದವಿರುವುದಾಗಿ ಅಭಿಪ್ರಾಯ ಪಟ್ಟಿರುವುದರಿಂದ ನ್ಯಾಯನಿರ್ಣಯಕ್ಕಾಗಿ ವಿವಾದವನ್ನು ಪರಿಶೀಲಿಸುವುದು ಅಗತ್ಯವೆಂದು ಕರ್ನಾಟಕ ಸರ್ಕಾರವು ಪರಿಗಣಿಸಿದೆ:

ಆದ್ದರಿಂದ ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 14, 1947)ರ 10ನೇ ಪ್ರಕರಣದ (1)ನೇ ಉಪ-ಪ್ರಕರಣದ(ಸಿ)(ಡಿ) ಖಂಡದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಸದರಿ ವಿವಾದವನ್ನು ನ್ಯಾಯ ನಿರ್ಣಯಕ್ಕಾಗಿ ಮತ್ತು ಆರು ತಿಂಗಳ ಒಳಗಾಗಿ ತೀರ್ಪನ್ನು ಒಪ್ಪಿಸಲು, **ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ರಾಮನಗರ** ಇಲ್ಲಿಗೆ ಕಳುಹಿಸಿದೆ.

### ವಾದಾಂಶಗಳು

1. ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಲಿಮಿಟೆಡ್, ಪ್ಲಾಟ್ ನಂ.1, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ, ಕಾರ್ಮಿಕ ಸಂಘಟನೆಯಿಂದ ಪ್ರತಿನಿಧಿಸಲ್ಪಡುವ ಕಾರ್ಮಿಕರು ಅನುಬಂಧ-1 ಮನವಿಯಲ್ಲಿ ತಿಳಿಸಿರುವ ವಿವಿಧ ಬೇಡಿಕೆಗಳನ್ನು ಆಡಳಿತವರ್ಗ ನಿಯತವಾಗಿ ಚರ್ಚಿಸಿ ಬಗೆಹರಿಸದೆ ಇರುವುದು ನ್ಯಾಯಸಮ್ಮತವೇ?

2. ಕಾರ್ಮಿಕ ಸಂಘದ ಪದಾಧಿಕಾರಿಯನ್ನು ಶಿಸ್ತು ಕ್ರಮಕ್ಕೆ ಒಳಪಟ್ಟು ಅಮಾನತ್ತು ಮಾಡಿರುತ್ತಾರೆಂಬ ವಿಷಯವನ್ನು ಮುಂದಿಟ್ಟುಕೊಂಡು ದಿನಾಂಕ: 09.11.2020 ರಿಂದ ಮುಷ್ಕರ ಕಾರ್ಮಿಕರು ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಎಂಪ್ಲಾಯೀಸ್ ಯೂನಿಯನ್, ನೇತೃತ್ವದಲ್ಲಿ ಮುಷ್ಕರ ಹೂಡಿರುವುದು ನ್ಯಾಯಸಮ್ಮತವೇ?

3. ದಿನಾಂಕ:09.11.2020 ರಿಂದ ಕಾರ್ಮಿಕರು ಮುಷ್ಕರ ಹೂಡಿರುತ್ತಾರೆಂದು ಆಡಳಿತವರ್ಗದವರಾದ ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಲಿಮಿಟೆಡ್, ಪ್ಲಾಟ್ ನಂ.1, ಬಿಡದಿ, ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ, ಇವರು ಇದಕ್ಕೆ ಪ್ರತಿಯಾಗಿ ದಿನಾಂಕ: 10.11.2020 ರಿಂದ ಕಾರ್ಖಾನೆಗೆ ಬೀಗಮುದ್ರೆ (ಲಾಕ್-ಔಟ್) ಘೋಷಿಸಿರುವುದು ನ್ಯಾಯಸಮ್ಮತವೇ?

4. ಹಾಗಲ್ಲದಿದ್ದಲ್ಲಿ ಸದರಿ ಕಾರ್ಮಿಕನು ಯಾವ ಪರಿಹಾರಕ್ಕೆ ಅರ್ಹನು?

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

ಸಹಿ/-
ದಿನಾಂಕ: 20/11/2020

(ಸಂಧ್ಯಾ ಎಲ್.ನಾಯಕ್)
ಸರ್ಕಾರದ ಉಪಕಾರ್ಯದರ್ಶಿ
ಕಾರ್ಮಿಕ ಇಲಾಖೆ

ಇವರಿಗೆ,

ಅಧ್ಯಕ್ಷಾಧಿಕಾರಿಗಳು, **ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ರಾಮನಗರ.**

**ಪ್ರತಿಗಳು:-** 1)ಕಾರ್ಮಿಕ ಆಯುಕ್ತರು, ಕಾರ್ಮಿಕ ಇಲಾಖೆ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29. ಇವರ ಪತ್ರ ಸಂ: ಐಡಿಎ-1/ಸಿಆರ್-57/2020-21, ದಿನಾಂಕ: 18.11.2020ಕ್ಕೆ ಉಲ್ಲೇಖಿಸಿದೆ.

2)**ಆಡಳಿತವರ್ಗ:-** ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಲಿಮಿಟೆಡ್, ಪ್ಲಾಟ್ ನಂ.1, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ.

3)**ಅರ್ಜಿದಾರರು:-** ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಎಂಪ್ಲಾಯೀಸ್ ಯೂನಿಯನ್, ಪ್ಲಾಟ್ ನಂ.1, ಬಿಡದಿ, ರಾಮನಗರ ಜಿಲ್ಲೆ.



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 595 |
| ಮಾನ್ಯ ಸದಸ್ಯರ ಹೆಸರು | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು). |
| ಉತ್ತರಿಸುವ ಸಚಿವರು | ಮಾನ್ಯ ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 10.12.2020 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿಯ ರಾಣಿ ಚನ್ನಮ್ಮ ವಿಶ್ವವಿದ್ಯಾಲಯವನ್ನು ಕಿತ್ತೂರು ತಾಲ್ಲೂಕು ಕೇಂದ್ರದ ವ್ಯಾಪ್ತಿಯಲ್ಲಿ ಸ್ಥಾಪಿಸಲು ಪ್ರಸ್ತಾವನೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ರಾಣಿ ಚನ್ನಮ್ಮ ವಿಶ್ವವಿದ್ಯಾಲಯವನ್ನು ಕಿತ್ತೂರು ತಾಲ್ಲೂಕು ಕೇಂದ್ರದಲ್ಲಿ ಸ್ಥಾಪಿಸಲು ಪ್ರಸ್ತಾವನೆ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಕಿತ್ತೂರು ನಾಡಿನ ಜನರ ಬೇಡಿಕೆಗೆ ಅನುಗುಣವಾಗಿ ಸರ್ಕಾರವು ಕೈಗೊಂಡ ಕ್ರಮವೇನು; | ಆದರೆ ಈ ಪ್ರಸ್ತಾವನೆ ಸ್ವೀಕೃತವಾದ ಪೂರ್ವದಲ್ಲಿಯೇ ಬೆಳಗಾವಿ ತಾಲ್ಲೂಕಿನ ಹಿರೇಬಾಗೇವಾಡಿ (ಸಂಕನಾಯ್ಕನಕೊಪ್ಪ) ಹಾಗೂ ಸು.ಹಾಲಗಿಮರ್ಡಿ ಗ್ರಾಮದ ಹತ್ತಿರ 126 ಎಕರೆ 27 ಗುಂಟೆ ಜಮೀನನ್ನು ಈಗಾಗಲೇ ರಾಣಿ ಚನ್ನಮ್ಮ ವಿಶ್ವವಿದ್ಯಾಲಯಕ್ಕೆ ಮಂಜೂರು ಮಾಡಿ ಕಂದಾಯ ಇಲಾಖೆಯಿಂದ ದಿನಾಂಕ 21.09.2020ರಂದು ಆದೇಶ ಹೊರಡಿಸಲಾಗಿರುತ್ತದೆ. ಪ್ರಸ್ತುತ ಸದರಿ ಜಾಗದ ಸರ್ವೆ ಕಾರ್ಯವೂ ಸಹ ಮುಗಿದಿದ್ದು, ರಸ್ತೆ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| ಇ) | ಯಾವ ಕಾಲಮಿತಿಯಲ್ಲಿ ಈ ಕುರಿತು ಕ್ರಮ ಕೈಗೊಳ್ಳಲಾಗುವುದು? | |

**ಸಂಖ್ಯೆ: ಇಡಿ 280 ಯುಆರ್‌ಸಿ 2020**

**(ಡಾ. ಅಶ್ವತ್ಥ ನಾರಾಯಣ ಸಿ.ಎನ್)**
ಉಪ ಮುಖ್ಯಮಂತ್ರಿ (ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ)

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1 | ಮಾನ್ಯ ಸದಸ್ಯರ ಹೆಸರು | : ಶ್ರೀ ರಘುಪತಿ ಭಟ್ ಕೆ. (ಉಡುಪಿ) |
| 2 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 773 |
| 3 | ಉತ್ತರಿಸಬೇಕಾದ ದಿನಾಂಕ | : 10-12-2020 |
| 4 | ಉತ್ತರಿಸಬೇಕಾದವರು | : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಉಡುಪಿ ಜಿಲ್ಲೆಯಲ್ಲಿ ಇಎಸ್ಐ ಆಸ್ಪತ್ರೆ ಪ್ರಾರಂಭಿಸುವ ಬಗ್ಗೆ ಯೋಜನೆ ರೂಪಿಸಲಾಗಿದೆಯೇ; | ಉಡುಪಿ ಜಿಲ್ಲೆಯಲ್ಲಿ ಇಎಸ್ಐ ಆಸ್ಪತ್ರೆ ಪ್ರಾರಂಭಿಸುವ ಬಗ್ಗೆ ಯೋಜನೆ ರೂಪಿಸಲಾಗಿರುವುದಿಲ್ಲ. ಆದರೆ, ಪ್ರಸ್ತುತ ಉಡುಪಿಯಲ್ಲಿ 04 ಕಾ.ರಾ.ವಿ. ಚಿಕಿತ್ಸಾಲಯಗಳು ಕಾರ್ಯ ನಿರ್ವಹಿಸುತ್ತಿವೆ. ಉಡುಪಿಯಿಂದ 55 ಕಿ.ಮೀ. ಅಂತರದಲ್ಲಿರುವ ಮಂಗಳೂರಿನಲ್ಲಿ ಇಎಸ್ಐ ಆಸ್ಪತ್ರೆ ಕಾರ್ಯ ನಿರ್ವಹಿಸುತ್ತಿದೆ. |
| (ಆ) | ಪ್ರಮುಖ ಜಿಲ್ಲೆಯಾಗಿರುವ ಉಡುಪಿಯಲ್ಲಿ ಲಕ್ಷಾಂತರ ಕಾರ್ಮಿಕರು ಇರುವುದರಿಂದ ಇಎಸ್ಐ ಆಸ್ಪತ್ರೆ ಪ್ರಾರಂಭಿಸುವ ಬಗ್ಗೆ ಹಲವಾರು ವರ್ಷಗಳ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಉಡುಪಿ ಜಿಲ್ಲೆಯಲ್ಲಿ ದಿನಾಂಕ: 13-08-2020 ರ ಅಂಕಿ ಅಂಶಗಳ ಅನುಸಾರ ವಿಮಾ ಕಾರ್ಮಿಕರ ಸಂಖ್ಯೆ: 67629 ಮಾತ್ರ ಆಗಿರುತ್ತದೆ ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿ 04 ಕಾರಾವಿ ಚಿಕಿತ್ಸಾಲಯಗಳು (1. ಮಣಿಪಾಲ, 2. ಉಡುಪಿ, 3. ಕಾರ್ಕಾಳ ಮತ್ತು 4. ಕುಂದಾಪುರ) ಹಾಗೂ 07 ಖಾಸಗಿ ಆಸ್ಪತ್ರೆಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ವಿಮಾ ಕಾರ್ಮಿಕರಿಗೆ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಲಾಗುತ್ತಿದೆ. |
| (ಇ) | ರಾಜ್ಯದಲ್ಲಿ ಯಾವ ಯಾವ ಜಿಲ್ಲೆಗಳಲ್ಲಿ ಇಎಸ್ಐ ಆಸ್ಪತ್ರೆಗಳನ್ನು ಪ್ರಾರಂಭಿಸುವ ಬಗ್ಗೆ ಬೇಡಿಕೆ ಇದೆ; | ರಾಜ್ಯದಲ್ಲಿ ಕಾರ್ಮಿಕರ ವಿಮಾ ಕಾರ್ಡುಗಳ ಸಂಖ್ಯೆಯನ್ನಾಧರಿಸಿ, ಅದರನ್ವಯ ಆಸ್ಪತ್ರೆಗಳನ್ನು ಪ್ರಾರಂಭಿಸುವ ಪ್ರಸ್ತಾವನೆಯನ್ನು ಮಾರ್ಗಸೂಚಿಯನ್ವಯ ಪರಿಶೀಲಿಸಿ, ಇ.ಎಸ್.ಐ ನಿಗಮಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗುತ್ತಿದೆ.<br>1. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ,<br>2. ಬೊಮ್ಮಸಂದ್ರ ಕೈಗಾರಿಕಾ ಪ್ರದೇಶ, ಬೆಂಗಳೂರು ನಗರ,<br>3. ಕೋಲಾರ ಜಿಲ್ಲೆಯ ನರಸಾಪುರ ಕೈಗಾರಿಕಾ ಪ್ರದೇಶ,<br>4. ತುಮಕೂರು ಜಿಲ್ಲೆಯ ವಸಂತ ನರಸಾಪುರ ಕೈಗಾರಿಕಾ ಪ್ರದೇಶ,<br>5. ಶಿವಮೊಗ್ಗ ಜಿಲ್ಲೆ,<br>6. ಬಳ್ಳಾರಿ ಜಿಲ್ಲೆ<br>7. ರಾಮನಗರ ಜಿಲ್ಲೆಯ ಹಾರೋಹಳ್ಳಿ ಕೈಗಾರಿಕಾ ಪ್ರದೇಶಗಳಲ್ಲಿ ಇಎಸ್ಐ ಆಸ್ಪತ್ರೆಗಳನ್ನು ಕಾರಾವಿ. ನಿಗಮದ ಸಹಮತಿಯೊಂದಿಗೆ ಪ್ರಾರಂಭಿಸುವ ಕಾರ್ಯ ಪ್ರಗತಿಯಲ್ಲಿದೆ. |

| | | |
|---|---|---|
| (ಈ) | ಹೊಸದಾಗಿ ಎಷ್ಟು ಇಎಸ್ಐ ಆಸ್ಪತ್ರೆಗಳನ್ನು ಪ್ರಾರಂಭಿಸಲಾಗಿದೆ; (ಜಿಲ್ಲಾವಾರು ಸಂಪೂರ್ಣ ವಿವರಗಳನ್ನು ಒದಗಿಸುವುದು) | ಹೊಸದಾಗಿ ಯಾವುದೇ ಕಾರಾವಿ ಆಸ್ಪತ್ರೆಗಳನ್ನು ಪ್ರಾರಂಭಿಸಿರುವುದಿಲ್ಲ, ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನಲ್ಲಿ ದಿನಾಂಕ: 08-03-2019 ರಂದು ಕಾರಾವಿ. ಚಿಕಿತ್ಸಾಲಯವನ್ನು ಪ್ರಾರಂಭಿಸಲಾಗಿರುತ್ತದೆ. |
| (ಉ) | ಹೊಸದಾಗಿ 61 ಇಎಸ್ಐ ಆಸ್ಪತ್ರೆಗಳನ್ನು ಪ್ರಾರಂಭಿಸುವ ಬಗ್ಗೆ 2017-18 ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಈ ಬಗ್ಗೆ ಕೈಗೊಂಡ ಕ್ರಮಗಳೇನು. ಪ್ರಸ್ತುತ ರಾಜ್ಯದಲ್ಲಿ ಒಟ್ಟು ಎಷ್ಟು ಇಎಸ್ಐ ಆಸ್ಪತ್ರೆಗಳು ಕಾರ್ಯ ನಿರ್ವಹಿಸುತ್ತಿವೆ? (ಜಿಲ್ಲಾವಾರು ಸಂಪೂರ್ಣ ವಿವರಗಳನ್ನು ಒದಗಿಸುವುದು) | 2017-18 ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಹೊಸದಾಗಿ 61 ಇಎಸ್ಐ ಆಸ್ಪತ್ರೆಗಳ ಪೈಕಿ 11 ಕಾರಾವಿ. ಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಅನುಮೋದನೆಯಾಗಿದ್ದು ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ.<br>ರಾಜ್ಯದಲ್ಲಿ ಒಟ್ಟು 07 ಕಾರಾವಿ. ಆಸ್ಪತ್ರೆ ಹಾಗೂ 02 ರೋಗ ಪತ್ತೆ ಹಚ್ಚುವ ಕೇಂದ್ರಗಳು ಮತ್ತು 113 ಕಾರಾವಿ. ಚಿಕಿತ್ಸಾಲಯಗಳು ಕಾರ್ಯ ನಿರ್ವಹಿಸುತ್ತಿದೆ (ವಿವರವನ್ನು ಅನುಬಂಧದಲ್ಲಿ ಲಗತ್ತಿಸಿದೆ) |

LD-LSI/215/2020

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಮತ್ತು ಸಕ್ಕರೆ ಸಚಿವರು

ಅನುಬಂಧ

| ಕ್ರಮ ಸಂಖ್ಯೆ | ಕಾ.ರಾ.ವಿ ಆಸ್ಪತ್ರೆಗಳು | ಸ್ಥಳ |
|---|---|---|
| 1 | ಕಾ.ರಾ.ವಿ ಆಸ್ಪತ್ರೆ | ಇಂದಿರಾನಗರ, ಬೆಂಗಳೂರು |
| 2 | ಕಾ.ರಾ.ವಿ ಆಸ್ಪತ್ರೆ | ಮಂಗಳೂರು |
| 3 | ಕಾ.ರಾ.ವಿ ಆಸ್ಪತ್ರೆ | ದಾವಣಗೆರೆ |
| 4 | ಕಾ.ರಾ.ವಿ ಆಸ್ಪತ್ರೆ | ಹುಬ್ಬಳ್ಳಿ |
| 5 | ಕಾ.ರಾ.ವಿ ಆಸ್ಪತ್ರೆ | ಬೆಳಗಾಂ |
| 6 | ಕಾ.ರಾ.ವಿ ಆಸ್ಪತ್ರೆ | ಮೈಸೂರು |
| 7 | ಕಾ.ರಾ.ವಿ ಆಸ್ಪತ್ರೆ | ದಾಂಡೇಲಿ |
| 8 | ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ | ಬೆಂಗಳೂರು |
| 9 | ರೋಗ ಪತ್ತೆ ಹಚ್ಚುವ ಕೇಂದ್ರ, | ನಂಜನಗೂಡು |
| | ಕಾ.ರಾ.ವಿ ಚಿಕಿತ್ಸಾಲಯಗಳು | ಬೆಂಗಳೂರು ನಗರ |
| 1 | ಕಾರಾವಿ ಚಿಕಿತ್ಸಾಲಯ | ಬನಶಂಕರಿ |
| 2 | ಕಾರಾವಿ ಚಿಕಿತ್ಸಾಲಯ | ಬಸವನಗುಡಿ |
| 3 | ಕಾರಾವಿ ಚಿಕಿತ್ಸಾಲಯ | ಬೊಮ್ಮನಹಳ್ಳಿ |
| 4 | ಕಾರಾವಿ ಚಿಕಿತ್ಸಾಲಯ | ಚಿನ್ನಿಪೇಟೆ |
| 5 | ಕಾರಾವಿ ಚಿಕಿತ್ಸಾಲಯ | ಬೊಮ್ಮಸಂದ್ರ |
| 6 | ಕಾರಾವಿ ಚಿಕಿತ್ಸಾಲಯ | ಕಾಟನ್‌ಪೇಟೆ |
| 7 | ಕಾರಾವಿ ಚಿಕಿತ್ಸಾಲಯ | ದಾಸರಹಳ್ಳಿ |
| 8 | ಕಾರಾವಿ ಚಿಕಿತ್ಸಾಲಯ | ದ್ಯಾವಸಂದ್ರ |
| 9 | ಕಾರಾವಿ ಚಿಕಿತ್ಸಾಲಯ | ಪ್ರೇಜರ್ ಟೌನ್ |
| 10 | ಕಾರಾವಿ ಚಿಕಿತ್ಸಾಲಯ | ಹನುಮಂತನಗರ |
| 11 | ಕಾರಾವಿ ಚಿಕಿತ್ಸಾಲಯ | ಜಯನಗರ |
| 12 | ಕಾರಾವಿ ಚಿಕಿತ್ಸಾಲಯ | ಜಾಲಹಳ್ಳಿ |
| 13 | ಕಾರಾವಿ ಚಿಕಿತ್ಸಾಲಯ | ಕೆ.ಆರ್.ಪುರಂ-1 |
| 14 | ಕಾರಾವಿ ಚಿಕಿತ್ಸಾಲಯ | ಕೆ.ಆರ್.ಪುರಂ-2 |
| 15 | ಕಾರಾವಿ ಚಿಕಿತ್ಸಾಲಯ | ಕೆಂಗೇರಿ |
| 16 | ಕಾರಾವಿ ಚಿಕಿತ್ಸಾಲಯ | ಕೋಣನಕುಂಟೆ |
| 17 | ಕಾರಾವಿ ಚಿಕಿತ್ಸಾಲಯ | ಮೈಸೂರು ರಸ್ತೆ |
| 18 | ಕಾರಾವಿ ಚಿಕಿತ್ಸಾಲಯ | ಮಾಗಡಿರಸ್ತೆ |
| 19 | ಕಾರಾವಿ ಚಿಕಿತ್ಸಾಲಯ | ಮಾರತಹಳ್ಳಿ |
| 20 | ಕಾರಾವಿ ಚಿಕಿತ್ಸಾಲಯ | ಮುನಿರೆಡ್ಡಿಪಾಳ್ಯ |
| 21 | ಕಾರಾವಿ ಚಿಕಿತ್ಸಾಲಯ | ಮಾರತಹಳ್ಳಿ |

| | | |
|---|---|---|
| 22 | ಕಾರಾವಿ ಚಿಕಿತ್ಸಾಲಯ | ಪೀಣ್ಯ |
| 23 | ಕಾರಾವಿ ಚಿಕಿತ್ಸಾಲಯ | ರಾಜಾಜಿನಗರ-1 |
| 24 | ಕಾರಾವಿ ಚಿಕಿತ್ಸಾಲಯ | ರಾಜಾಜಿನಗರ-2 |
| 25 | ಕಾರಾವಿ ಚಿಕಿತ್ಸಾಲಯ | ರಸೆಲ್ ಮಾರ್ಕೆಟ್-2 |
| 26 | ಕಾರಾವಿ ಚಿಕಿತ್ಸಾಲಯ | ಶೇಷಾದ್ರಿಪುರಂ |
| 27 | ಕಾರಾವಿ ಚಿಕಿತ್ಸಾಲಯ | ಶ್ರೀರಾಮಪುರಂ |
| 28 | ಕಾರಾವಿ ಚಿಕಿತ್ಸಾಲಯ | ಸುಬ್ರಮಣ್ಯಪುರಂ |
| 29 | ಕಾರಾವಿ ಚಿಕಿತ್ಸಾಲಯ | ವಿಜಯನಗರ |
| 30 | ಕಾರಾವಿ ಚಿಕಿತ್ಸಾಲಯ | ವಿಶ್ವನೀಡಂ |
| 31 | ಕಾರಾವಿ ಚಿಕಿತ್ಸಾಲಯ | ವಿವೇಕನಗರ |
| 32 | ಕಾರಾವಿ ಚಿಕಿತ್ಸಾಲಯ | ವೈಟ್ ಫೀಲ್ಡ್ |
| 33 | ಕಾರಾವಿ ಚಿಕಿತ್ಸಾಲಯ | ವಿಲ್ಸನ್‌ಗಾರ್ಡನ್ |
| 34 | ಕಾರಾವಿ ಚಿಕಿತ್ಸಾಲಯ | ಯಶವಂತಪುರ |
| 35 | ಕಾರಾವಿ ಚಿಕಿತ್ಸಾಲಯ | ಯಲಹಂಕ |
| 36 | ಕಾರಾವಿ ಚಿಕಿತ್ಸಾಲಯ | ಹಲಸೂರು |
| 37 | ಕಾರಾವಿ ಚಿಕಿತ್ಸಾಲಯ | ಲಗ್ಗೆರೆ |
| 38 | ಕಾರಾವಿ ಚಿಕಿತ್ಸಾಲಯ | ಅತ್ತಿಬೆಲೆ |
| 39 | ಕಾರಾವಿ ಚಿಕಿತ್ಸಾಲಯ | ಸಿಂಗಸಂದ್ರ |
| 40 | ಕಾರಾವಿ ಚಿಕಿತ್ಸಾಲಯ | ಜಿಗಣಿ |
| | ಬೆಂಗಳೂರು ಗ್ರಾಮಾಂತರ | |
| 41 | ಕಾರಾವಿ ಚಿಕಿತ್ಸಾಲಯ | ಚನ್ನಪಟ್ಟಣ |
| 42 | ಕಾರಾವಿ ಚಿಕಿತ್ಸಾಲಯ | ದೊಡ್ಡಬಳ್ಳಾಪುರ |
| 43 | ಕಾರಾವಿ ಚಿಕಿತ್ಸಾಲಯ | ಹೊಸಕೋಟೆ |
| 44 | ಕಾರಾವಿ ಚಿಕಿತ್ಸಾಲಯ | ಗೊಟ್ಟಿಗೆರೆ |
| 45 | ಕಾರಾವಿ ಚಿಕಿತ್ಸಾಲಯ | ನೆಲಮಂಗಲ |
| 46 | ಕಾರಾವಿ ಚಿಕಿತ್ಸಾಲಯ | ದೇವನಹಳ್ಳಿ |
| | ಚಿತ್ರದುರ್ಗ ಜಿಲ್ಲೆ | |
| 47 | ಕಾರಾವಿ ಚಿಕಿತ್ಸಾಲಯ | ಚಿತ್ರದುರ್ಗ |
| | ದಾವಣಗೆರೆ ಜಿಲ್ಲೆ | |
| 48 | ಕಾರಾವಿ ಚಿಕಿತ್ಸಾಲಯ | ಸಿಟಿ ದಾವಣಗೆರೆ |
| 49 | ಕಾರಾವಿ ಚಿಕಿತ್ಸಾಲಯ | ಹರಿಹರ |
| 50 | ಕಾರಾವಿ ಚಿಕಿತ್ಸಾಲಯ | ಕೆ.ಬಿ. ಬಡಾವಣೆ |

| | | |
|---|---|---|
| ಕೋಲಾರ ಜಿಲ್ಲೆ | | |
| 51 | ಕಾರಾವಿ ಚಿಕಿತ್ಸಾಲಯ | ರಾಬರ್ಟ್‌ಸನ್ ಪೇಟೆ |
| 52 | ಕಾರಾವಿ ಚಿಕಿತ್ಸಾಲಯ | ಮಾಲೂರು |
| ಶಿವಮೊಗ್ಗ ಜಿಲ್ಲೆ | | |
| 53 | ಕಾರಾವಿ ಚಿಕಿತ್ಸಾಲಯ | ಭದ್ರಾವತಿ |
| 54 | ಕಾರಾವಿ ಚಿಕಿತ್ಸಾಲಯ | ಎಂ.ಪಿ.ಎಂ. ಭದ್ರಾವತಿ |
| 55 | ಕಾರಾವಿ ಚಿಕಿತ್ಸಾಲಯ | ಶಿವಮೊಗ್ಗ |
| 56 | ಕಾರಾವಿ ಚಿಕಿತ್ಸಾಲಯ | ಸಾಗರ ರಸ್ತೆ |
| 57 | ಕಾರಾವಿ ಚಿಕಿತ್ಸಾಲಯ | ಎನ್.ಟಿ. ರಸ್ತೆ |
| ತುಮಕೂರು ಜಿಲ್ಲೆ | | |
| 58 | ಕಾರಾವಿ ಚಿಕಿತ್ಸಾಲಯ | ತುಮಕೂರು |
| 59 | ಕಾರಾವಿ ಚಿಕಿತ್ಸಾಲಯ | ಕುಣಿಗಲ್ |
| 60 | ಕಾರಾವಿ ಚಿಕಿತ್ಸಾಲಯ | ತಿಪಟೂರು |
| ರಾಮನಗರ ಜಿಲ್ಲೆ | | |
| 61 | ಕಾರಾವಿ ಚಿಕಿತ್ಸಾಲಯ | ರಾಮನಗರ |
| 62 | ಕಾರಾವಿ ಚಿಕಿತ್ಸಾಲಯ | ಬಿಡದಿ |
| ದಕ್ಷಿಣ ಕನ್ನಡ ಜಿಲ್ಲೆ | | |
| 63 | ಕಾರಾವಿ ಚಿಕಿತ್ಸಾಲಯ | ಕರಂಗಲಪಾಡಿ |
| 64 | ಕಾರಾವಿ ಚಿಕಿತ್ಸಾಲಯ | ಕುಲಶೇಖರ |
| 65 | ಕಾರಾವಿ ಚಿಕಿತ್ಸಾಲಯ | ಮಾರ್ಗನ್ಸ್ ಗೇಟ್ |
| 66 | ಕಾರಾವಿ ಚಿಕಿತ್ಸಾಲಯ | ಪಣಂಬೂರು |
| 67 | ಕಾರಾವಿ ಚಿಕಿತ್ಸಾಲಯ | ಪುತ್ತೂರು |
| ಹಾಸನ ಜಿಲ್ಲೆ | | |
| 68 | ಕಾರಾವಿ ಚಿಕಿತ್ಸಾಲಯ | ಹಾಸನ |
| ಮಂಡ್ಯ ಜಿಲ್ಲೆ | | |
| 69 | ಕಾರಾವಿ ಚಿಕಿತ್ಸಾಲಯ | ಮಂಡ್ಯ |
| 70 | ಕಾರಾವಿ ಚಿಕಿತ್ಸಾಲಯ | ಬೆಳಗೊಳ |
| 71 | ಕಾರಾವಿ ಚಿಕಿತ್ಸಾಲಯ | ಮದ್ದೂರು |
| ಮೈಸೂರು ಜಿಲ್ಲೆ | | |
| 72 | ಕಾರಾವಿ ಚಿಕಿತ್ಸಾಲಯ | ಬೆಳವಾಡಿ |
| 73 | ಕಾರಾವಿ ಚಿಕಿತ್ಸಾಲಯ | ಹುಣಸೂರು |

| | | |
|---|---|---|
| 74 | ಕಾರಾವಿ ಚಿಕಿತ್ಸಾಲಯ | ಬೃಂದಾವನ ಬಡಾವಣೆ |
| 75 | ಕಾರಾವಿ ಚಿಕಿತ್ಸಾಲಯ | ಕೇಂದ್ರ, ಮೈಸೂರು |
| 76 | ಕಾರಾವಿ ಚಿಕಿತ್ಸಾಲಯ | ದಕ್ಷಿಣ, ಮೈಸೂರು |
| 77 | ಕಾರಾವಿ ಚಿಕಿತ್ಸಾಲಯ | ಎನ್.ಆರ್. ಮೊಹಲ್ಲಾ |
| 78 | ಕಾರಾವಿ ಚಿಕಿತ್ಸಾಲಯ | ನಂಜನಗೂಡು |
| 79 | ಕಾರಾವಿ ಚಿಕಿತ್ಸಾಲಯ | ಟಿ. ನರಸೀಪುರ |
| 80 | ಕಾರಾವಿ ಚಿಕಿತ್ಸಾಲಯ | ವಿ.ವಿ.ಪುರಂ |
| ಉಡುಪಿ ಜಿಲ್ಲೆ | | |
| 81 | ಕಾರಾವಿ ಚಿಕಿತ್ಸಾಲಯ | ಮಣಿಪಾಲ್ |
| 82 | ಕಾರಾವಿ ಚಿಕಿತ್ಸಾಲಯ | ಉಡುಪಿ |
| 83 | ಕಾರಾವಿ ಚಿಕಿತ್ಸಾಲಯ | ಕಾರ್ಕಳ |
| 84 | ಕಾರಾವಿ ಚಿಕಿತ್ಸಾಲಯ | ಕುಂದಾಪುರ |
| ಬೆಳಗಾವಿ ಜಿಲ್ಲೆ | | |
| 85 | ಕಾರಾವಿ ಚಿಕಿತ್ಸಾಲಯ | ಆನಂದವಾಡಿ (ಶಹಾಪುರ) |
| 86 | ಕಾರಾವಿ ಚಿಕಿತ್ಸಾಲಯ | ಪೀರನವಾಡಿ |
| 87 | ಕಾರಾವಿ ಚಿಕಿತ್ಸಾಲಯ | ಗೋಕಾಕ್ |
| 88 | ಕಾರಾವಿ ಚಿಕಿತ್ಸಾಲಯ | ಕೊಣ್ಣೂರು |
| 89 | ಕಾರಾವಿ ಚಿಕಿತ್ಸಾಲಯ | ಕೆ.ಎಸ್.ಆರ್.ಟಿ.ಸಿ. ಬೆಳಗಾವಿ |
| 90 | ಕಾರಾವಿ ಚಿಕಿತ್ಸಾಲಯ | ಉದ್ಯಮ್ ಭಾಗ (ಭಾಗ್ಯನಗರ) |
| 91 | ಕಾರಾವಿ ಚಿಕಿತ್ಸಾಲಯ | ಯಮುನಾಪುರ |
| 92 | ಕಾರಾವಿ ಚಿಕಿತ್ಸಾಲಯ | ನಿಪ್ಪಾಣಿ |
| ಧಾರವಾಡ ಜಿಲ್ಲೆ | | |
| 93 | ಕಾರಾವಿ ಚಿಕಿತ್ಸಾಲಯ | ಧಾರವಾಡ |
| 94 | ಕಾರಾವಿ ಚಿಕಿತ್ಸಾಲಯ | ಹುಬ್ಬಳ್ಳಿ-1 |
| 95 | ಕಾರಾವಿ ಚಿಕಿತ್ಸಾಲಯ | ಬೇಲೂರು |
| 96 | ಕಾರಾವಿ ಚಿಕಿತ್ಸಾಲಯ | ತಾರಿಹಾಳ |
| 97 | ಕಾರಾವಿ ಚಿಕಿತ್ಸಾಲಯ | ಗೋಕುಲ |
| 98 | ಕಾರಾವಿ ಚಿಕಿತ್ಸಾಲಯ | ವರೂರು |
| ಗದಗ ಜಿಲ್ಲೆ | | |
| 99 | ಕಾರಾವಿ ಚಿಕಿತ್ಸಾಲಯ | ಗದಗ |
| 100 | ಕಾರಾವಿ ಚಿಕಿತ್ಸಾಲಯ | ಹುಲಕೋಟಿ |

| | | |
|---|---|---|
| ಉತ್ತರ ಕನ್ನಡ ಜಿಲ್ಲೆ | | |
| 101 | ಕಾರಾವಿ ಚಿಕಿತ್ಸಾಲಯ | ದಾಂಡೇಲಿ |
| ಬಾಗಲಕೋಟೆ ಜಿಲ್ಲೆ | | |
| 102 | ಕಾರಾವಿ ಚಿಕಿತ್ಸಾಲಯ | ಬಾಗಲಕೋಟೆ |
| 103 | ಕಾರಾವಿ ಚಿಕಿತ್ಸಾಲಯ | ಬನಹಟ್ಟಿ |
| ಬಳ್ಳಾರಿ ಜಿಲ್ಲೆ | | |
| 104 | ಕಾರಾವಿ ಚಿಕಿತ್ಸಾಲಯ | ಬಳ್ಳಾರಿ |
| 105 | ಕಾರಾವಿ ಚಿಕಿತ್ಸಾಲಯ | ಟಿ.ಬಿ. ಡ್ಯಾಂ |
| ಬಿಜಾಪುರ ಜಿಲ್ಲೆ | | |
| 106 | ಕಾರಾವಿ ಚಿಕಿತ್ಸಾಲಯ | ಬಿಜಾಪುರ |
| ಗುಲ್ಬರ್ಗಾ ಜಿಲ್ಲೆ | | |
| 107 | ಕಾರಾವಿ ಚಿಕಿತ್ಸಾಲಯ | ಎಂ.ಎಸ್.ಕೆ. ಮಿಲ್ಸ್ |
| 108 | ಕಾರಾವಿ ಚಿಕಿತ್ಸಾಲಯ | ಮಳ್ಖೇಡ |
| 109 | ಕಾರಾವಿ ಚಿಕಿತ್ಸಾಲಯ | ಸೇಡಂ |
| 110 | ಕಾರಾವಿ ಚಿಕಿತ್ಸಾಲಯ | ಶಹಬಾದ್ |
| 111 | ಕಾರಾವಿ ಚಿಕಿತ್ಸಾಲಯ | ವಾಡಿ |
| ರಾಯಚೂರು ಜಿಲ್ಲೆ | | |
| 112 | ಕಾರಾವಿ ಚಿಕಿತ್ಸಾಲಯ | ರಾಯಚೂರು |
| ಕೊಪ್ಪಳ ಜಿಲ್ಲೆ | | |
| 113 | ಕಾರಾವಿ ಚಿಕಿತ್ಸಾಲಯ | ಕೊಪ್ಪಳ |

**ಕರ್ನಾಟಕ ವಿಧಾನ ಸಭೆ**

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 796
2. ಸದಸ್ಯರ ಹೆಸರು : ಶ್ರೀ ನಾಗೇಂದ್ರ ಎಲ್. (ಚಾಮರಾಜ)
3. ಉತ್ತರಿಸಬೇಕಾದ ದಿನಾಂಕ : 10.12.2020
4. ಉತ್ತರಿಸಬೇಕಾದ ಸಚಿವರು : ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಮೈಸೂರು ನಗರದಲ್ಲಿರುವ ಕೃಷ್ಣರಾಜ ಆಸ್ಪತ್ರೆಯಲ್ಲಿ ಒಟ್ಟು ಎಷ್ಟು ವೈದ್ಯರು, ನರ್ಸ್‌ಗಳು ಮತ್ತು ತಾಂತ್ರಿಕ ತಜ್ಞರು ಕಾರ್ಯನಿರ್ವಹಿಸುತ್ತಿದ್ದಾರೆ;(ವಿವರ ಒದಗಿಸುವುದು) | ಕೃಷ್ಣರಾಜ ಆಸ್ಪತ್ರೆಯಲ್ಲಿ ಮಂಜೂರಾಗಿರುವ ಬೋಧಕ ವರ್ಗದವರಲ್ಲಿ (ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು ಮತ್ತು ಸೀನಿಯರ್ ರೆಸಿಡೆಂಟ್ ಗಳು ಕ್ಲಿನಿಕಲ್ ವಿಭಾಗಗಳಿಗೆ ಸೇರಿದ ಒಟ್ಟು 147 ವೈದ್ಯರು, 23 ಹಿರಿಯ ಪ್ರಯೋಗಶಾಲಾ ತಂತ್ರಜ್ಞರು, 21 ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಅಲ್ಲದೇ ಕೃಷ್ಣರಾಜ ಆಸ್ಪತ್ರೆಗೆ ಪ್ರತ್ಯೇಕವಾಗಿ ಹುದ್ದೆಗಳು ಮಂಜೂರಾಗಿರುತ್ತದೆ (ಅನುಬಂಧ-1 ಲಗತ್ತಿಸಿದೆ). |
| ಆ) | ರೋಗಿಗಳಿಗೆ ಅನುಗುಣವಾಗಿ ಆಸ್ಪತ್ರೆಯಲ್ಲಿ ಸಿಬ್ಬಂದಿಗಳು ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸಿಬ್ಬಂದಿಗಳ ಕೊರತೆ ನೀಗಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ವಿವರ ಒದಗಿಸುವುದು) | ಶುಶ್ರೂಷಕರ ಕೊರತೆ ಇದ್ದು, ಉಳಿದಂತೆ ಯಾವುದೇ ಸಿಬ್ಬಂದಿಗಳ ಕೊರತೆ ಇರುವುದಿಲ್ಲ. ಶುಶ್ರೂಷಕರ ಕೊರತೆ ಸರಿದೂಗಿಸಲು 77 ಶುಶ್ರೂಷಕರುಗಳನ್ನು ಸ್ವೈಚ್ಛಂದ್ರಿ ಆಧಾರದ ಮೇಲೆ ಪಡೆಯಲಾಗುತ್ತಿದೆ. |
| ಇ) | ಸದರಿ ಆಸ್ಪತ್ರೆಯಲ್ಲಿ ಒಟ್ಟು ಎಷ್ಟು ಡಯಾಲಿಸೀಸ್ ಯಂತ್ರಗಳಿವೆ; ಒಂದು ದಿನಕ್ಕೆ ಕನಿಷ್ಠ ಎಷ್ಟು ರೋಗಿಗಳು ಡಯಾಲಿಸಿಸ್ ಗೆ ಒಳಪಡುತ್ತಿದ್ದಾರೆ. ಇದಕ್ಕೆ ನಿಗದಿಪಡಿಸಲಾಗಿರುವ ಶುಲ್ಕ ಎಷ್ಟು; | ಸದರಿ ಆಸ್ಪತ್ರೆಯಲ್ಲಿ ಒಟ್ಟು 10 ಡಯಾಲಿಸಿಸ್ ಯಂತ್ರಗಳು ಲಭ್ಯವಿದ್ದು, ಪ್ರತಿ ದಿನಕ್ಕೆ ಸರಾಸರಿ 20-24 ರೋಗಿಗಳಿಗೆ ಡಯಾಲಿಸಿಸ್ ಚಿಕಿತ್ಸೆಯನ್ನು ಉಚಿತವಾಗಿ ಒದಗಿಸಲಾಗುತ್ತಿದೆ. |
| ಈ) | ಆಸ್ಪತ್ರೆಯಲ್ಲಿ ಔಷಧಿಗಳ, ಹಾಸಿಗೆಗಳ, ICU ಗಳ ಹಾಗೂ ಇನ್ನಿತರೆ ಮೂಲಭೂತ ಸೌಕರ್ಯಗಳ ಕೊರತೆ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಆ ಬಗ್ಗೆ ಕೈಗೊಂಡಿರುವ ಕ್ರಮಗಳೇನು? | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |

**ಸಂಖ್ಯೆ: ಎಂಇಡಿ 481 ಎಂಎಸ್ಎಫ್ 2020**

(ಡಾ: ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು.

ಕೃಷ್ಣರಾಜೇಂದ್ರ ಆಸ್ಪತ್ರೆ, ಮೈಸೂರು

ದಿನಾಂಕ: 10.12.2020 ರಲ್ಲಿದ್ದಂತೆ ಮಂಜೂರಾಗಿರುವ, ಕರ್ತವ್ಯ ನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಸಿಬ್ಬಂದಿಗಳ ವಿವರ ಲೆಕ್ಕ ಶೀರ್ಷಿಕೆ:

2210–05–105–1–44 (ಯೋಜನೇತರ)

| ಕ್ರಸಂ | ಮಂಜೂರಾದ ಹುದ್ದೆಗಳ ವಿವರ | ಒಟ್ಟು ಮಂಜೂರಾದ ಹುದ್ದೆಗಳು | ಆರೋಗ್ಯ ಮತ್ತು ಕು.ಕ ಇಲಾಖೆಯಿಂದ ನಿಯೋಜನೆ ಮೇಲೆ ಕಾರ್ಯನಿರತರು | ಸ್ವಾಯತ್ತ ಸಂಸ್ಥೆಯಿಂದ ನೇಮಕಾತಿ ಹೊಂದಿ ಕಾರ್ಯನಿರತರು | ಒಟ್ಟು ಕಾರ್ಯನಿರತ ಹುದ್ದೆಗಳು | ಖಾಲಿ ಹುದ್ದೆಗಳು |
|---|---|---|---|---|---|---|
| | ಗ್ರೂಪ್ 'ಎ' | | | | | |
| 1 | ಸ್ಥಾನೀಯ ವೈದ್ಯಾಧಿಕಾರಿಗಳು | 1 | 1 | 0 | 1 | 0 |
| 2 | ಸಿವಿಲ್ ಸರ್ಜನ್ | 2 | 2 | 0 | 2 | 0 |
| 3 | ಸಹಾಯಕ ಶಸ್ತ್ರ ಚಿಕಿತ್ಸಕರು | 20 | 0 | 18 | 18 | 2 |
| 4 | ದಂತ ಶಸ್ತ್ರ ಚಿಕಿತ್ಸಕರು | 1 | 0 | 1 | 1 | 0 |
| 5 | ಸಹಾಯಕ ಪ್ರಾಧ್ಯಾಪಕರು | 1 | 0 | 0 | 0 | 1 |
| 6 | ಆಪ್ಥಮಾಲಜಿಸ್ಟ್ | 1 | 0 | 0 | 0 | 1 |
| 7 | ಸಹಾಯಕ ಶಸ್ತ್ರ ಚಿಕಿತ್ಸಕರು(ನೇತ್ರಾ) | 1 | 0 | 0 | 0 | 1 |
| 8 | ಸಹಾಯಕ ಶಸ್ತ್ರ ಚಿಕಿತ್ಸಕರು ಸಂಚಾರಿ ಘಟಕ | 1 | 1 | 0 | 1 | 0 |
| 9 | ಚೀಫ್ ಫಾರ್ಮಸಿಸ್ಟ್ | 1 | 0 | 0 | 0 | 1 |
| | ಒಟ್ಟು | 29 | 4 | 19 | 23 | 6 |

| | | | | | | |
|---|---|---|---|---|---|---|
| ಗ್ರೂಪ್'ಬಿ' | | | | | | |
| 1 | ಸಹಾಯಕ ಶಸ್ತ್ರ ಚಿಕಿತ್ಸಕರು(ದರ್ಜೆ–3) | 2 | 0 | 0 | 0 | 2 |
| 2 | ಪದವೀದರ ಫಾರ್ಮಸಿಸ್ಟ್ | 2 | 2 | 0 | 2 | 0 |
| 3 | ಶುಶ್ರೂಷಕ ಅಧೀಕ್ಷಕರು(ದರ್ಜೆ–1) | 3 | 1 | 0 | 1 | 2 |
| 4 | ಸಹಾಯಕ ಆಡಳಿತಾಧಿಕಾರಿಗಳು | 1 | 1 | 0 | 1 | 0 |
| 5 | ಪ್ರಿನ್ಸಿಪಾಲ್(ಎಸ್.ಒ.ಎನ್) | 1 | 0 | 0 | 0 | 1 |
| ಒಟ್ಟು | | **9** | **4** | **0** | **4** | **5** |
| ಗ್ರೂಪ್ 'ಸಿ' | | | | | | |
| 1 | ಶುಶ್ರೂಷಕ ಅಧೀಕ್ಷಕರು(ದರ್ಜೆ–2) | 16 | 11 | 0 | 11 | 5 |
| 2 | ನರ್ಸಿಂಗ್ ಟ್ಯೂಟರ್ಸ್ | 15 | 2 | 0 | 2 | 13 |
| 3 | ಹಿರಿಯ ಶುಶ್ರೂಷಕರು | 34 | 31 | 0 | 31 | 3 |
| 4 | ಹಿರಿಯ ಪುರುಷ ಆರೋಗ್ಯ ಸಹಾಯಕರು | 1 | 1 | 0 | 1 | 0 |
| 5 | ಶುಶ್ರೂಷಕರು | 214 | 108 | 26 | 134 | 80 |
| 6 | ಹಿರಿಯ ಫಾರ್ಮಸಿಸ್ಟ್ | 6 | 5 | 0 | 5 | 1 |
| 7 | ಫಾರ್ಮಸಿಸ್ಟ್ | 4 | 4 | 0 | 4 | 0 |
| 8 | ಡಯಟಿಷಿಯನ್ | 1 | 0 | 0 | 0 | 1 |
| 9 | ಕಛೇರಿ ಅಧೀಕ್ಷಕರು | 2 | 2 | 0 | 2 | 0 |
| 10 | ಪ್ರಥಮ ದರ್ಜೆ ಸಹಾಯಕರು | 7 | 3 | 1 | 4 | 3 |
| 11 | ದ್ವಿತೀಯ ದರ್ಜೆ ಸಹಾಯಕರು | 16 | 2 | 0 | 2 | 14 |
| 12 | ಜೂನಿಯರ್ ಸ್ಟೆನೋಗ್ರಾಫರ್ | 1 | 0 | 0 | 0 | 1 |
| 13 | ಬೆರಳಚ್ಚುಗಾರರು | 2 | 0 | 0 | 0 | 2 |
| 14 | ಫಿಜಿಯೋಥೆರಪಿಸ್ಟ್ | 4 | 3 | 0 | 3 | 1 |

| | | | | | | |
|---|---|---|---|---|---|---|
| 15 | ದಂತ ಮೆಕ್ಯಾನಿಕ್ | 1 | 0 | 0 | 0 | 1 |
| 16 | ಡೆಂಟಲ್ ಹೈಜಿನಿಸ್ಟ್ | 1 | 0 | 0 | 0 | 1 |
| 17 | ಪ್ರೋಸ್ಟೆಟಿಸ್ಟ್ | 1 | 0 | 0 | 0 | 1 |
| 18 | ಆರ್ಥೋಟಿಸ್ಟ್ | 1 | 0 | 0 | 0 | 1 |
| 19 | ವಿದ್ಯುತ್ ತಂತ್ರಜ್ಞರು | 2 | 0 | 0 | 0 | 2 |
| 20 | ಇ.ಸಿ.ಜಿ ಟೆಕ್‌ನಿಷಿಯನ್ | 1 | 0 | 1 | 1 | 0 |
| 21 | ರೇಡಿಯೋಗ್ರಾಫರ್ | 2 | 0 | 0 | 0 | 2 |
| 22 | ಎಕ್ಸ್-ರೇ ಟೆಕ್‌ನಿಷಿಯನ್ | 3 | 2 | 1 | 3 | 0 |
| 23 | ಕಿ.ಪ್ರಯೋಗ ಶಾಲಾ ತಂತ್ರಜ್ಞರು | 5 | 1 | 1 | 2 | 3 |
| 24 | ಬ್ಲಡ್ ಬ್ಯಾಂಕ್ ಟೆಕ್ನಿಷಿಯನ್ | 1 | 0 | 1 | 1 | 0 |
| 25 | ಉಪ ಜಿಲ್ಲಾ ಆರೋಗ್ಯ ಶಿಕ್ಷಣಾಧಿಕಾರಿಗಳು | 1 | 1 | 0 | 1 | 0 |
| 26 | ಆಪ್ತಾಲ್ಮಿಕ್ ಆಫೀಸರ್(ರಿಫ್ರಾಕ್ಷನಿಸ್ಟ್) | 1 | 1 | 0 | 1 | 0 |
| 27 | ಪ್ಯಾರಾ ಮೆಡಿಕಲ್ ವರ್ಕರ್ | 1 | 0 | 0 | 0 | 1 |
| 28 | ವಾಹನ ಚಾಲಕರು | 6 | 1 | 0 | 1 | 5 |
| | **ಒಟ್ಟು** | **350** | **178** | **31** | **209** | **141** |
| | **ಗ್ರೂಪ್ 'ಡಿ'** | | | | | |
| 1 | ಗ್ರೂಪ್'ಡಿ' 4ನೇ ದರ್ಜೆ ನೌಕರರು | **298** | **41** | **0** | **41** | **257** |
| | **ಒಟ್ಟು** | **298** | **41** | **0** | **41** | **257** |
| | **ಒಟ್ಟು ಹುದ್ದೆಗಳು** | **686** | **227** | **50** | **277** | **409** |

ವೈದ್ಯಕೀಯ ಅಧೀಕ್ಷಕರು,
ಕೆ.ಆರ್.ಆಸ್ಪತ್ರೆ,ಮೈಸೂರು

| ಕರ್ನಾಟಕ ವಿಧಾನಸಭೆ | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 760 |
| 2 | ಮಾನ್ಯ ಸದಸ್ಯರ ಹೆಸರು | ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ) |
| 3 | ಉತ್ತರಿಸಬೇಕಾದ ದಿನಾಂಕ | 10.12.2020 |
| 4 | ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಎಷ್ಟು ಸರ್ಕಾರಿ ವೈದ್ಯಕೀಯ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ; ಈ ಸಂಸ್ಥೆಗಳಲ್ಲಿ ಬೋಧಕ ಮತ್ತು ಬೋದಕೇತರ ಹುದ್ದೆಗಳ ಸಂಖ್ಯೆ ಎಷ್ಟು; ಎಷ್ಟು ಹುದ್ದೆಗಳು ಭರ್ತಿಯಾಗಿವೆ ಮತ್ತು ಎಷ್ಟು ಹುದ್ದೆಗಳು ಖಾಲಿ ಇವೆ; (ಸಂಪೂರ್ಣ ವಿವರ ಒದಗಿಸುವುದು) | ರಾಜ್ಯದಲ್ಲಿ ಒಟ್ಟು 17 ಸರ್ಕಾರಿ ಸ್ವಾಯತ್ತ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಈ ಸಂಸ್ಥೆಗಳಲ್ಲಿ ಮಂಜೂರಾದ, ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಇರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳ ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |
| (ಆ) | ಕೋವಿಡ್-19 ಹಿನ್ನೆಲೆಯಲ್ಲಿ ಸಾವಿರಾರು ಹುದ್ದೆಗಳು ಖಾಲಿ ಇದ್ದು, ಅವುಗಳನ್ನು ಭರ್ತಿ ಮಾಡದೇ ಇರುವುದರಿಂದ ಕೋವಿಡ್-19 ಮಹಾಮಾರಿಯ ನಿರ್ವಹಣೆಯಲ್ಲಿ ಸಾರ್ವಜನಿಕರಿಗೆ ತೀವ್ರ ತೊಂದರೆಯಾಗುತ್ತಿರುವುದು ನಿಜವೇ; | ಕೋವಿಡ್-19 ಪ್ರಕರಣಗಳನ್ನು ಸಂಪರ್ಕವಾಗಿ ನಿಭಾಯಿಸುವ ನಿಟ್ಟಿನಲ್ಲಿ ವೈದ್ಯಕೀಯ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸಲು ಅಗತ್ಯವಾದ 637 ಹುದ್ದೆಗಳನ್ನು ಗುತ್ತಿಗೆ/ಹೊರಗುತ್ತಿಗೆ ಆಧಾರದ ಮೇಲೆ ತಾತ್ಕಾಲಿಕವಾಗಿ 6 ತಿಂಗಳ ಮಟ್ಟಿಗೆ ಭರ್ತಿ ಮಾಡಿಕೊಳ್ಳಲು ಆದೇಶ ಸಂಖ್ಯೆ:ಎಂಇಡಿ 165 ಎಂಎಸ್ಎಫ್ 2020, ದಿನಾಂಕ:01.06.2020ರಲ್ಲಿ ಸರ್ಕಾರವು ಆದೇಶಿಸಿದ್ದು, ಅದರಂತೆ ತಾತ್ಕಾಲಿಕವಾಗಿ ನೇಮಿಸಿಕೊಂಡು ಸಾರ್ವಜನಿಕರಿಗೆ ತೊಂದರೆಯಾಗದಂತೆ ಕಾರ್ಯನಿರ್ವಹಿಸಲಾಗಿದೆ. |

| | | |
|---|---|---|
| (ಇ) | ಸರ್ಕಾರವು ಕಾಲಮಿತಿಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಕೈಗೊಳ್ಳುವುದೇ? | ವೈದ್ಯಕೀಯ ಶಿಕ್ಷಣ ಇಲಾಖೆಯ ಸ್ವಾಯತ್ತ ಸಂಸ್ಥೆಗಳಲ್ಲಿ ಖಾಲಿ ಇರುವ ಬೋಧಕ (ಗ್ರೂಪ್ -ಎ ಮತ್ತು ಗ್ರೂಪ್-ಬಿ) ಹುದ್ದೆಗಳನ್ನು ಎಂ.ಐ.ಸಿ. ನಿಯಮಾವಳಿಯಂತೆ ಕಾಲಕಾಲಕ್ಕೆ ಸಂಸ್ಥೆಯ ಬೈಲಾದನ್ವಯ ವೃಂದ ಮತ್ತು ಮೀಸಲಾತಿಗೆ ಒಳಪಟ್ಟು ನೇರ ಸಂದರ್ಶನ ಸಮಿತಿಯ ಮುಖಾಂತರ ಭರ್ತಿ ಮಾಡಿಕೊಳ್ಳಲಾಗುತ್ತಿದೆ.<br><br>ಗ್ರೂಪ್ "ಸಿ" ನಲ್ಲಿ ಖಾಲಿ ಇರುವ ಶುಶ್ರೂಷಕ ಹುದ್ದೆಗಳನ್ನು ಕರ್ನಾಟಕ ಪರಿಕ್ಷಾ ಪ್ರಾಧಿಕಾರ, ಬೆಂಗಳೂರು ಇವರ ಮೂಲಕ ಮತ್ತು ಇನ್ನಿತರ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲಾಗುತ್ತಿದೆ.<br><br>ಗ್ರೂಪ್ "ಡಿ" ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲಾಗುತ್ತಿದೆ. |

ಎಂಇಡಿ 262 ಆರ್‌ಐ 2020

(ಡಾ.ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಅನುಬಂಧ

| ಕ್ರಸಂ | ಸಂಸ್ಥೆಯ ಹೆಸರು | ಬೋಧಕ ಹುದ್ದೆಗಳು | | | ಬೋಧಕೇತರ ಹುದ್ದೆಗಳು | | |
|---|---|---|---|---|---|---|---|
| | | ಮಂಜೂರಾದ ಹುದ್ದೆಗಳು | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಮಂಜೂರಾದ ಹುದ್ದೆಗಳು | ಭರ್ತಿಯಾಗಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು |
| 1 | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು. | 888 | 616 | 272 | 2834 | 2486 | 348 |
| 2 | ಮೈಸೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಮೈಸೂರು. | 433 | 281 | 152 | 1430 | 499 | 931 |
| 3 | ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ. | 486 | 320 | 166 | 1062 | 387 | 675 |
| 4 | ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ. | 424 | 212 | 132 | 902 | 478 | 427 |
| 5 | ಬೆಳಗಾಂ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೆಳಗಾಂ. | 227 | 115 | 36 | 517 | 279 | 89 |
| 6 | ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಮಂಡ್ಯ. | 262 | 248 | 19 | 514 | 275 | 221 |
| 7 | ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹಾಸನ. | 274 | 192 | 82 | 568 | 415 | 153 |
| 8 | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರ್ | 287 | 235 | 48 | 782 | 455 | 239 |
| 9 | ರಾಯಚೂರು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ರಾಯಚೂರು. | 297 | 246 | 51 | 523 | 492 | 32 |
| 10 | ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಶಿವಮೊಗ್ಗ. | 363 | 233 | 130 | 820 | 726 | 94 |
| 11 | ಬೌರಿಂಗ್ ಲೇಡಿಕರ್ಜನ್ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನ ಸಂಸ್ಥೆ ಬೆಂಗಳೂರು. | 151 | 33 | 118 | 659 | 214 | 445 |
| 12 | ಚಾಮರಾಜನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಚಾಮರಾಜನಗರ | 36 | 22 | 9 | 122 | 77 | 45 |
| 13 | ಕೊಡಗು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಕೊಡಗು | 228 | 127 | 101 | 250 | 230 | 20 |
| 14 | ಕಾರವಾರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಕಾರವಾರ | 493 | 272 | 218 | 337 | 271 | 66 |
| 15 | ಗದಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಗದಗ | 234 | 151 | 83 | 316 | 316 | 0 |
| 16 | ಕೊಪ್ಪಳ ವೈದ್ಯಕೀಯ ವಿಜ್ಞಾನಗಳಸಂಸ್ಥೆ, ಕೊಪ್ಪಳ | 228 | 132 | 90 | 416 | 407 | 9 |
| 17 | ಗುಲ್ಬರ್ಗಾ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಗುಲ್ಬರ್ಗಾ | 235 | 192 | 43 | 113 | 113 | 0 |

# ಕರ್ನಾಟಕ ವಿಧಾನ ಸಭೆ

1 ಮಾನ್ಯ ಸದಸ್ಯರ ಹೆಸರು : ಶ್ರೀ ಶಿವಣ್ಣ ಬಿ. (ಆನೇಕಲ್)

2 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 759

3 ಉತ್ತರಿಸಬೇಕಾದ ದಿನಾಂಕ : 10-12-2020

4 ಉತ್ತರಿಸಬೇಕಾದವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಆನೇಕಲ್ ತಾಲ್ಲೂಕಿನ ಇಗ್ಗಲೂರಿನಲ್ಲಿ ಇ.ಎಸ್.ಐ. ಆಸ್ಪತ್ರೆ ಕಟ್ಟಡ ಕಾಮಗಾರಿ ಆರಂಭವಾಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಪೂರ್ಣ ಮಾಹಿತಿ ನೀಡುವುದು) | ಹೌದು |
| (ಆ) | ಕಳೆದ 2 ವರ್ಷಗಳ ಹಿಂದೆ ಇ.ಎಸ್.ಐ. ಆಸ್ಪತ್ರೆ ಕಟ್ಟಡ ಮಂಜೂರಾಗಿದ್ದರೂ ಇದುವರೆವಿಗೂ ಕಟ್ಟಡ ಕಾಮಗಾರಿ ಆರಂಭವಾಗದಿರಲು ಕಾರಣವೇನು; (ಮಾಹಿತಿ ನೀಡುವುದು) | ಆಸ್ಪತ್ರೆಯ ಕಟ್ಟಡ ನಿರ್ಮಾಣ ಕಾರ್ಯ ಕಾರಾವಿ. ನಿಗಮಕ್ಕೆ ಸಂಬಂಧಿಸಿದ್ದು, Central PWD ಗೆ ಕಟ್ಟಡದ ನಿರ್ಮಾಣ ಕಾರ್ಯವನ್ನು ವಹಿಸಲಾಗಿದೆ. |
| (ಇ) | ಆನೇಕಲ್ ತಾಲ್ಲೂಕಿನ ಇಗ್ಗಲೂರಿನಲ್ಲಿ ಇ.ಎಸ್.ಐ. ಆಸ್ಪತ್ರೆಯ ಕಟ್ಟಡವನ್ನು ಯಾವ ಕಾಲ ಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? (ಪೂರ್ಣ ಮಾಹಿತಿ ನೀಡುವುದು) | ಕಾ.ರಾ.ವಿ ನಿಗಮ ತನ್ನ ಪತ್ರ ಸಂಖ್ಯೆ: W/11/13/Karnataka/8/2012(Land-PMD) Dt. 18-07-2019 ರಲ್ಲಿ ತಿಳಿಸಿರುವಂತೆ ಆಸ್ಪತ್ರೆ ನಿರ್ಮಾಣ ಕಾಮಗಾರಿಯನ್ನು Central PWD ಯೊಂದಿಗೆ ಮಾಡಿಕೊಂಡಿರುವ MoU ಷರತ್ತುಗಳನ್ವಯ ಕಟ್ಟಡದ ಕಾಮಗಾರಿಯನ್ನು ಕೈಗೊಳ್ಳಲಾಗುತ್ತಿದೆ. |

LD-LSI/216/2020

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಮತ್ತು ಸಕ್ಕರೆ ಸಚಿವರು

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 547
2. ಮಾನ್ಯ ಸದಸ್ಯರ ಹೆಸರು : ಶ್ರೀ ಶಿವಲಿಂಗೇಗೌಡ ಕೆ.ಎಂ. (ಅರಸೀಕೆರೆ)
3. ಉತ್ತರಿಸಬೇಕಾದ ದಿನಾಂಕ : 10/12/2020
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಅರಸೀಕೆರೆಯಲ್ಲಿ ಕಾರ್ಮಿಕರಿಗೋಸ್ಕರ "ಕಾರ್ಮಿಕ ಭವನ" ನಿರ್ಮಾಣ ಮಾಡುವ ಉದ್ದೇಶ ಸರ್ಕಾರಕ್ಕೆ ಇದೆಯೇ: | ಇಲ್ಲ. |
| ಆ) | ಇದ್ದಲ್ಲಿ ಯಾವಾಗ ನಿರ್ಮಾಣ ಮಾಡಲಾಗುವುದು? | ಉದ್ಭವಿಸುವುದಿಲ್ಲ. |

ಕಾಇ 403 ಎಲ್‌ಇಟಿ 2020

(ಅರಬೈಲ್ ಶಿವರಾಮ ಹೆಬ್ಬಾರ್)
ಕಾರ್ಮಿಕ ಮತ್ತು ಸಕ್ಕರೆ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 792
2. ಮಾನ್ಯ ಸದಸ್ಯರ ಹೆಸರು : ಶ್ರೀ ಮಂಜುನಾಥ ಹೆಚ್.ಪಿ (ಹುಣಸೂರು)
3. ಉತ್ತರಿಸಬೇಕಾದ ದಿನಾಂಕ : 10/12/2020
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಜಾರಿಯಲ್ಲಿರುವ ವಿವಿಧ ಕಾರ್ಮಿಕ ವರ್ಗಗಳ ಅಭಿವೃದ್ಧಿ ಮತ್ತು ನೆರವಿಗಾಗಿ ಇರುವ ಯೋಜನೆಗಳು ಯಾವುವು: ಅವುಗಳನ್ನು ಜಾರಿಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು: (ವಿವರ ನೀಡುವುದು) | ಕಾರ್ಮಿಕ ಇಲಾಖೆಯು ತನ್ನ ಅಧೀನದಲ್ಲಿ ಬರುವ ವಿವಿಧ ಮಂಡಳಿಗಳ ಮೂಲಕ ಅಸಂಘಟಿತ ಕಾರ್ಮಿಕರಿಗೆ ವಿವಿಧ ಸೌಲಭ್ಯಗಳನ್ನು ಒದಗಿಸುತ್ತಿದ್ದು, ಅವುಗಳ ವಿವರ ಈ ಕೆಳಗಿನಂತಿದೆ:<br>**<u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u>**<br>ಅಸಂಘಟಿತ ವಲಯದ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು, ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br>(1) **<u>ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-</u>** ಖಾಸಗಿ ವಾಣಿಜ್ಯ ಸಾರಿಗೆ ವಾಹನ ಕಾರ್ಮಿಕರಿಗೆ ಸಂಬಂಧಪಟ್ಟಂತೆ ಜಾರಿಗೊಳಿಸುತ್ತಿರುವ ಈ ಯೋಜನೆಯಡಿ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>**(ಅ) ಅಪಘಾತ ಪರಿಹಾರ:-**<br>➢ ಅಪಘಾತದಿಂದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಮರಣ ಹೊಂದಿದಲ್ಲಿ, ಅವರ ನಾಮನಿರ್ದೇಶಿತರಿಗೆ ರೂ.5 ಲಕ್ಷ ಪರಿಹಾರ.<br>➢ ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ಗರಿಷ್ಠ ರೂ.2 ಲಕ್ಷದ ವರೆಗೆ ಪರಿಹಾರ.<br>❖ ಅಪಘಾತಕ್ಕೊಳಗಾಗಿ ಆಸ್ಪತ್ರೆಯಲ್ಲಿ 15 ದಿನಗಳಿಗಿಂತ ಕಡಿಮೆ ಅವಧಿಗೆ ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ, ಗರಿಷ್ಠ ರೂ. 50,000/- ರವರೆಗೆ, ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಪಾವತಿಸಲಾಗುವುದು. |

| | | |
|---|---|---|
| | | ❖ 15 ದಿನಗಳಿಗಿಂತ ಹೆಚ್ಚು ದಿನ ಒಳರೋಗಿಯಾಗಿ ಚಿಕಿತ್ಸೆ ಪಡೆದಿದ್ದಲ್ಲಿ, ಗರಿಷ್ಠ ರೂ. 1 ಲಕ್ಷದವರೆಗೆ ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೋ ಅದನ್ನು ಪಾವತಿಸಲಾಗುವುದು.<br>(ಆ) **ಶೈಕ್ಷಣಿಕ ಧನಸಹಾಯ:–**<br>ಅಪಘಾತದಿಂದ ನಿಧನರಾದ ಹಾಗೂ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರು, ಯೋಜನೆಯಡಿ ನೋಂದಾಯಿತ ನಿರ್ವಾಹಕರು ಹಾಗೂ ಕ್ಲೀನರ್‌ಗಳ ಗರಿಷ್ಠ ಇಬ್ಬರು ಮಕ್ಕಳಿಗೆ 1 ರಿಂದ 12ನೇ ತರಗತಿಯವರೆಗೆ ವ್ಯಾಸಂಗಕ್ಕಾಗಿ ವಾರ್ಷಿಕ ತಲಾ ರೂ.10,000/–ಗಳ ಶೈಕ್ಷಣಿಕ ಧನ ಸಹಾಯ ನೀಡಲಾಗುತ್ತಿದೆ.<br>(ಇ) **ಅಪಘಾತ ಜೀವ ರಕ್ಷಕ:–** ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸೃಷ್ಟಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ.<br>**ಈ ಯೋಜನೆಯಡಿ:–**<br>❖ ಈವರೆಗೆ ಒಟ್ಟು **38,569** ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಿ ಅಪಘಾತ ಜೀವರಕ್ಷಕರನ್ನಾಗಿ ಸಜ್ಜುಗೊಳಿಸಿದೆ.<br>**(2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:–**<br>(ಅ) **"ಸ್ಮಾರ್ಟ್ ಕಾರ್ಡ್":–** ಯೋಜನೆಯಡಿ ಪ್ರಸ್ತುತ 11 ಅಸಂಘಟಿತ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.<br>(ಆ) **ಕಾರ್ಮಿಕ ಸೇವಾ ಕೇಂದ್ರ :–**<br>➢ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 9ರನ್ವಯ ಫಲಾನುಭವಿಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ಲಭ್ಯವಿರುವ ಎಲ್ಲಾ ಯೋಜನೆಗಳ ಕುರಿತು ಮಾಹಿತಿ ನೀಡಲು, ಯೋಜನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಅವಶ್ಯಕವಿರುವ ದಾಖಲಾತಿಗಳನ್ನು ಸಿದ್ಧಪಡಿಸಲು ಹಾಗೂ ನಿಗದಿಪಡಿಸಿದ ಅರ್ಜಿ ನಮೂನೆಗಳನ್ನು ಭರ್ತಿ ಮಾಡಿ ಸಂಬಂಧಪಟ್ಟವರಿಗೆ ರವಾನಿಸಲು ಸಹಾಯವಾಗುವಂತೆ ರಾಜ್ಯದ ಎಲ್ಲಾ 175 |

| | | |
|---|---|---|
| | | ರವಾನಿಸಲು ಸಹಾಯವಾಗುವಂತೆ ರಾಜ್ಯದ ಎಲ್ಲಾ 175 ತಾಲ್ಲೂಕುಗಳಲ್ಲಿ ತಲಾ ಒಂದರಂತೆ ಕಾರ್ಮಿಕ ಸೇವಾ ಕೇಂದ್ರಗಳನ್ನು ಹಾಗೂ ಬೆಂಗಳೂರು ವ್ಯಾಪ್ತಿಯಲ್ಲಿ 6 ಕಾರ್ಮಿಕ ಸೇವಾ ಕೇಂದ್ರಗಳು ಸೇರಿ ಒಟ್ಟು 181 ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲು ನಿರ್ಣಯಿಸಿದ್ದು, ಈಗಾಗಲೇ 159 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.<br><br>➢ ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿಗಳು ಅಸಂಘಟಿತ ಕಾರ್ಮಿಕರಿಗೆ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಕುರಿತು ಮಾಹಿತಿ, ಸಹಾಯ ಹಾಗೂ ಸೌಲಭ್ಯಗಳನ್ನು, ಸದರಿ ಸೇವಾ ಕೇಂದ್ರಗಳಲ್ಲಿ ಕಾರ್ಮಿಕ ಬಂಧುಗಳ ಮೂಲಕ ಪಡೆಯಲು ವ್ಯವಸ್ಥೆ ಮಾಡಲಾಗುತ್ತಿದೆ.<br><br>**(3) (ಅ) ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ–ಎಸ್‌ವೈಎಂ):–**<br>ಕೇಂದ್ರ ಸರ್ಕಾರದ ಈ ಯೋಜನೆಯಡಿ 18 – 40 ವರ್ಷ ವಯೋಮಾನದ ಅಸಂಘಟಿತ ಕಾರ್ಮಿಕರು ನೊಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/– ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/– ರಿಂದ ರೂ. 200/– ರವರೆಗೆ ಕೇಂದ್ರ ಸರ್ಕಾರವು ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ.<br><br>**(ಆ) ಎನ್.ಪಿ. ಎಸ್ ಫಾರ್ ಟ್ರೇಡರ್ಸ್ ಯೋಜನೆ:–**<br><br>ಈ ಯೋಜನೆಯಡಿ ನೋಂದಾಯಿತ ಅಂಗಡಿ ಮಾಲೀಕರು, ಚಿಲ್ಲರೆ ವ್ಯಾಪಾರಿಗಳು, ಅಕ್ಕಿ ಗಿರಣಿ ಮಾಲೀಕರು, ಎಣ್ಣೆ ಗಿರಣಿ ಮಾಲೀಕರು, ವರ್ಕ್‌ಶಾಪ್ ಮಾಲೀಕರು, ಕಮಿಷನ್ ಏಜೆಂಟ್ಸ್, ರಿಯಲ್ ಎಸ್ಟೇಟ್‌ನ ಬ್ರೋಕರ್ಸ್, ಸಣ್ಣ ಹೋಟೆಲ್ ಹಾಗೂ ರೆಸ್ಟೋರೆಂಟ್‌ನ ಮಾಲೀಕರು ಹಾಗೂ ಅಂತಹ ಇತರೆ ಸಣ್ಣ ವ್ಯಾಪಾರಗಳಲ್ಲಿ ತೊಡಗಿಸಿಕೊಂಡ ವ್ಯಾಪಾರಿಗಳು/ಲಘು ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಿಗಳು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3000/–ಗಳ ಪಿಂಚಣಿ ಸೌಲಭ್ಯ ಒದಗಿಸಲಾಗುತ್ತದೆ. |

| | | |
|---|---|---|
| | | **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ :**<br>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಹಾಗೂ ಅವರ ಅವಲಂಬಿತರಿಗೆ 19 ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸಲಾಗುತ್ತಿದ್ದು, ವಿವರಗಳನ್ನು **ಅನುಬಂಧ-1** ರಲ್ಲಿ ಒದಗಿಸಿದೆ.<br>ಮಂಡಳಿಯ ಸೌಲಭ್ಯಗಳು ನೋಂದಾಯಿತ ಕಾರ್ಮಿಕರಿಗೆ ತಲುಪಲು ಈ ಕೆಳಕಂಡ ಕ್ರಮವನ್ನು ಅನುಸರಿಸಲಾಗುತ್ತಿದೆ.<br>• ಮಂಡಳಿಯಿಂದ ವಿತರಿಸಲಾದ ಎಲ್ಲಾ ಸೌಲಭ್ಯಗಳನ್ನು ಸಕಾಲ ಸೇವೆಯಡಿ ತಂದು ಕಾರ್ಮಿಕರಿಗೆ ನಿಗಧಿತ ಅವಧಿಯೊಳಗೆ ಸೇವೆಗಳು ದೊರಕುವಂತೆ ಕ್ರಮಕೈಗೊಳ್ಳಲಾಗಿದೆ.<br>• ಮಂಡಳಿಯಿಂದ ದೊರಕುತ್ತಿರುವ ಸೌಲಭ್ಯದ ಕುರಿತು ವ್ಯಾಪಕ ಪ್ರಚಾರ ಮಾಡಲು ಐ.ಇ.ಸಿ ಚಟುವಟಿಕೆಗಳನ್ನು ರೂಪಿಸಲಾಗಿದ್ದು, ಈಗಾಗಲೇ ಕೆ.ಎಸ್.ಆರ್.ಟಿ.ಸಿ ಬಸ್ ಬ್ರ್ಯಾಂಡಿಂಗ್ ಹಾಗೂ ಕೆ.ಎಸ್.ಆರ್.ಟಿ.ಸಿ ಬಸ್ ಸ್ಟ್ಯಾಂಡ್‌ಗಳಲ್ಲಿ ಆಡಿಯೋ ಅನೌನ್ಸ್‌ಮೆಂಟ್ ಮಾಡಲಾಗುತ್ತಿದೆ. ಹಾಗೂ ಈ ಕುರಿತು ವಿವಿಧ ಪತ್ರಿಕೆಗಳಲ್ಲೂ ಸಹ ಜಾಹೀರಾತು ಪ್ರಕಟಣೆಗೊಳಿಸಲಾಗಿರುತ್ತದೆ.<br>• ರಾಜ್ಯಾದಾದ್ಯಂತ ಎಲ್ಲಾ ಜಿಲ್ಲಾಧಿಕಾರಿಗಳ ಕಛೇರಿ ಹಾಗೂ ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಕಛೇರಿಗಳಲ್ಲಿ ಮಂಡಳಿಯ ಅಧೀನದಲ್ಲಿರುವ 209 ಹೋರ್ಡಿಂಗ್ಸ್ ಪ್ಯಾನಲ್‌ಗಳಲ್ಲಿ ಕಾರ್ಮಿಕರನ್ನು ನೋಂದಾಯಿಸುವ ಮತ್ತು ಮಂಡಳಿಯ ಸೌಲಭ್ಯದ ಕುರಿತಾದ ಮಾಹಿತಿಯನ್ನು ಹೊಂದಿರುವ ಹೋರ್ಡಿಂಗ್ಸ್‌ಗಳನ್ನು ಮುದ್ರಿಸಿ ಅಳವಡಿಸಲು ಕ್ರಮವಹಿಸಲಾಗಿದೆ.<br>• ಬೆಂಗಳೂರು ಪ್ರಾದೇಶಿಕ-01, ಕಲಬುರಗಿ ಮತ್ತು ಬೆಳಗಾವಿ ಪ್ರಾದೇಶಿಕಕ್ಕೆ ಸಂಬಂಧಿಸಿದ ಅಧಿಕಾರಿಗಳ ಕಾರ್ಯವ್ಯಾಪ್ತಿಯಲ್ಲಿ Digital Wall Painting ಮೂಲಕ ಪ್ರಚಾರ ಮಾಡಲು ಹಾಗೂ ಪ್ರತಿ ತಾಲ್ಲೂಕುಗಳಿಗೆ 500 ಪೋಸ್ಟರ್‌ಗಳು ಮತ್ತು 8 ಬ್ಯಾನರ್‌ಗಳನ್ನು ಹಿರಿಯ / ಕಾರ್ಮಿಕ ನಿರೀಕ್ಷಕರುಗಳ ಕಛೇರಿಗಳಿಗೆ ಮುದ್ರಿಸಿ |

| | | |
|---|---|---|
| | | ಸರಬರಾಜು ಮಾಡಲು ದಿನಾಂಕ: 20-10-2020 ರಂದು MC&A ಈ ಸಂಸ್ಥೆಗೆ ಕಾರ್ಯಾದೇಶವನ್ನು ನೀಡಲಾಗಿರುತ್ತದೆ. ಈ ಚಟುವಟಿಕೆಯು ಪ್ರಗತಿಯಲ್ಲಿರುತ್ತದೆ.<br><br>3) <u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-</u><br><br>ಸದರಿ ಮಂಡಳಿಗೆ ವಂತಿಗೆ ಪಾವತಿ ಮಾಡುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಈ ಕೆಳಕಂಡ ಯೋಜನೆಗಳು ಜಾರಿಯಲ್ಲಿರುತ್ತವೆ.<br><br>1. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ<br>2. ವೈದ್ಯಕೀಯ ನೆರವು.<br>3. ಅಪಘಾತ ಧನ ಸಹಾಯ.<br>4. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ.<br>5. ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರಕ್ಕೆ ಧನ ಸಹಾಯ.<br>6. ವಾರ್ಷಿಕ ಕ್ರೀಡಾಕೂಟ ಹಮ್ಮಿಕೊಳ್ಳುವ ಕಾರ್ಮಿಕ ಸಂಘಟನೆಗೆ ಧನ ಸಹಾಯ. |
| ಆ) | ಕಟ್ಟಡ ಕಾರ್ಮಿಕರ ನಿಧಿ ಮತ್ತಿತರ ಕಾರ್ಮಿಕರ ನಿಧಿಯಲ್ಲಿರುವ ಮೊತ್ತವನ್ನು ಸಕಾಲಿಕವಾಗಿ ಬಳಸಲು ಇರುವ ತೊಂದರೆಗಳೇನು: | ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಹಾಗೂ ಅವರ ಅವಲಂಬಿತರಿಗೆ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸಲು ಕಟ್ಟಡ ಕಾರ್ಮಿಕರ ನಿಧಿಯಲ್ಲಿರುವ ಮೊತ್ತವನ್ನು ಸಕಾಲಿಕವಾಗಿ, ಹಾಗೂ ಅವಶ್ಯಕತೆಗನುಗುಣವಾಗಿ, ನಿಯಮಾನುಸಾರವಾಗಿ ಬಳಸಲಾಗುತ್ತಿದೆ. |
| ಇ) | ಕಟ್ಟಡ ಕಾರ್ಮಿಕರುಗಳಿಗೆ ಆಯಾ ಸ್ಥಳಗಳಲ್ಲಿಯೇ ಸೌಲಭ್ಯಗಳನ್ನು ನೀಡುವುದಕ್ಕೆ ಸರ್ಕಾರವು ಕೈಗೊಂಡ ಕ್ರಮಗಳೇನು: (ವಿವರ ನೀಡುವುದು) | ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರುಗಳಿಗೆ ಆಯಾ ಸ್ಥಳದಲ್ಲಿಯೇ ಸೌಲಭ್ಯಗಳನ್ನು ವಿತರಿಸುವ ದೃಷ್ಟಿಯಿಂದ ಸೇವಾ ಸಿಂಧು ತಂತ್ರಾಂಶದಲ್ಲಿ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಲಾಗಿರುತ್ತದೆ. ಕಟ್ಟಡ ಕಾರ್ಮಿಕರು ಯಾವುದೇ ಸೌಲಭ್ಯಗಳನ್ನು ಪಡೆಯಲು ಹತ್ತಿರದಲ್ಲಿರುವ Common Service Centre ನಲ್ಲಿ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಿದೆ. |

**ಕಾಇ 410 ಎಲ್‌ಇಟಿ 2020**

(*ಅರಬೈಲ್ ಶಿವರಾಂ ಹೆಬ್ಬಾರ್*)
ಕಾರ್ಮಿಕ ಮತ್ತು ಸಕ್ಕರೆ ಸಚಿವರು

# ಅನುಬಂಧ-01

**ಕನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು**

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ **ರೂ.2,000/-**
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ **ರೂ.1000/-**
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.2,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-** ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ** ಮರುಪಾವತಿ ಸೌಲಭ್ಯ.
5. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-** ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ **ರೂ. 30,000/-** ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/-**
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.50,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**

| ಕ್ರಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |

| | | | | | | | |
|---|---|---|---|---|---|---|---|
| 4 | Chief Pharmacist | 1 | 0 | 0 | 0 | 1 | ಪದೋನ್ನತಿ ಹುದ್ದೆ |
| 5 | Surgeon & Resident Medical Officer | 2 | 0 | 0 | 0 | 2 | ಪದೋನ್ನತಿ ಹುದ್ದೆ |
| 6 | Medical Officer (ULC) | 1 | 0 | 0 | 0 | 1 | |
| 7 | Medical Officer (20 beded) | 1 | 0 | 0 | 0 | 1 | ಈ ಕಛೇರಿಯ ಪತ್ರ .ವಿಮ್ಸ್/ಸಿ(2)/131/2019-20 ದಿ:03.10.2019ರಲ್ಲಿ ಖಾಲಿ ಇರುವ ಸೀನಿಯರ್ ರೆಸಿಡೆಂಟ್ /ಟ್ಯೂಟರ್ ಹುದ್ದೆಗಳಿಗೆ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಿ ದಿ:23.12.2019ರಂದು ನಡೆದ ನೇರ ಸಂದರ್ಶನದ ಆಯ್ಕೆ ಪಟ್ಟಿಯನ್ನು ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ |
| 8 | Superintendent (SPL) | 1 | 0 | 0 | 0 | 1 | |
| 9 | Asst Administritive Officer | 2 | 2 | 0 | 0 | 0 | |
| 10 | Nursing Suptd., Gr-I | 2 | 0 | 0 | 0 | 2 | |
| 11 | Medical Record Officer | 1 | 0 | 0 | 0 | 1 | ಈ ಕಛೇರಿಯ ಪತ್ರ .ವಿಮ್ಸ್/ಸಿ(2)/131/2019-20 ದಿ:03.10.2019ರಲ್ಲಿ ಖಾಲಿ ಇರುವ ಸೀನಿಯರ್ ರೆಸಿಡೆಂಟ್ /ಟ್ಯೂಟರ್ ಹುದ್ದೆಗಳಿಗೆ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಿ ದಿ:23.12.2019ರಂದು ನಡೆದ ನೇರ ಸಂದರ್ಶನದ ಆಯ್ಕೆ ಪಟ್ಟಿಯನ್ನು ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ. |
| | TOTAL of Group-B | 39 | 24 | 1 | 0 | 14 | |
| | GROUP - C | | | | | | |
| 1 | S.D.A. | 19 | 0 | 0 | 0 | 19 | ಖಾಲಿ ಇರುವ ಹುದ್ದೆಗಳಲ್ಲಿ ಗುತ್ತಿಗೆ / ಮಿತಿ ವೇತನ/ಹೊರ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುತ್ತಾರೆ. |
| 2 | Typist | 3 | 0 | 0 | 0 | 3 | |
| 3 | Receptionist-cum-Clerk | 1 | 0 | 0 | 0 | 1 | |
| 4 | Typist cum Assistant (clerk cum | 11 | 1 | 0 | 0 | 10 | |
| 5 | Drivers | 3 | 2 | 1 | 0 | 0 | |
| 6 | Stenographer - Gr.I (kannada) | 1 | 0 | 0 | 0 | 1 | |
| 7 | Typist Sr. | 1 | 1 | 0 | 0 | 0 | |
| 8 | Assistant Librarian | 2 | 1 | 1 | 0 | 0 | |
| 9 | Documentalist | 1 | 0 | 1 | 0 | 0 | |
| 10 | Store Keeper cum Record Clerk | 24 | 0 | 0 | 0 | 24 | |
| 11 | Coding Clerks | 2 | 0 | 0 | 0 | 2 | |
| 12 | Record Clerks | 2 | 0 | 0 | 0 | 2 | |
| 13 | F.D.A | 15 | 8 | 0 | 0 | 7 | |
| 14 | Pharmacist | 10 | 2 | 3 | 5 | 0 | |
| 15 | Radiographer | 3 | 3 | 0 | 0 | 0 | |
| 16 | Jr. Lab. Technician | 23 | 23 | 5 | 0 | -5 | |
| 17 | X-Ray Technician | 5 | 1 | 4 | 3 | -3 | |
| 18 | Stenographer | 1 | 0 | 0 | 0 | 1 | |
| 19 | Blood Bank Technician | 8 | 5 | 3 | 9 | -6 | |
| 20 | Dental Hyginist | 1 | 0 | 0 | 0 | 1 | |
| 21 | Electrician | 2 | 1 | 3 | 1 | -3 | |
| 22 | Refractioct | 3 | 2 | 0 | 0 | 1 | |
| 23 | Leprosy Technician | 1 | 0 | 0 | 0 | 1 | |
| 24 | Senior Driver | 3 | 1 | 0 | 0 | 2 | |
| 25 | Orthopaedist | 1 | 0 | 0 | 0 | 1 | ಈ ಕಛೇರಿಯ ಪತ್ರ .ವಿಮ್ಸ್/ಸಿ(2)/131/2019-20 ದಿ:03.10.2019ರಲ್ಲಿ ಖಾಲಿ ಇರುವ ಹುದ್ದೆಗಳಿಗೆ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಿ ದಿ:23.12.2019ರಂದು ನಡೆದ ನೇರ ಸಂದರ್ಶನದ ಆಯ್ಕೆ ಪಟ್ಟಿಯನ್ನು ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ. |
| 26 | Modeller | 1 | 0 | 0 | 0 | 1 | ಖಾಲಿ ಇರುವ ಹುದ್ದೆಗಳಲ್ಲಿ ಗುತ್ತಿಗೆ / ಮಿತಿ ವೇತನ/ಹೊರ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುತ್ತಾರೆ. |
| 27 | Parameter worker | 1 | 0 | 0 | 0 | 1 | |
| 28 | Opthalmic Asst. | 2 | 2 | 0 | 0 | 0 | ಖಾಲಿ ಇರುವ ಹುದ್ದೆಗಳಲ್ಲಿ ಗುತ್ತಿಗೆ / ಮಿತಿ ವೇತನ/ಹೊರ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುತ್ತಾರೆ. |
| 29 | Dialysis Technician | 3 | 2 | 1 | 1 | -2 | |
| 30 | C.T. Technician | 4 | 3 | 0 | 0 | 1 | |

| | | | | | | | |
|---|---|---|---|---|---|---|---|
| 31 | Psychiatry Social worker | 1 | 0 | 0 | 0 | 1 | ಈ ಕಛೇರಿಯ ಪತ್ರ .ವಿಮ್ಸ್/ಸಿ(2)/131/2019-20 ದಿ:03.10.2019ರಲ್ಲಿ ಖಾಲಿ ಇರುವ ಹುದ್ದೆಗಳಿಗೆ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಿ ದಿ:23.12.2019ರಂದು ನಡೆದ ನೇರ ಸಂದರ್ಶನದ ಆಯ್ಕೆ ಪಟ್ಟಿಯನ್ನು ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ. |
| 32 | Medical Physicist | 1 | 0 | 0 | 0 | 1 | ಖಾಲಿ ಇರುವ ಹುದ್ದೆಗಳಲ್ಲಿ ಗುತ್ತಿಗೆ / ಮಿತಿ/ ಶಿಷ್ಯ ವೇತನ/ಹೊರ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುತ್ತಾರೆ. |
| 33 | Echo Technician * | 1 | 0 | 0 | 0 | 1 | |
| 34 | Radiotherapi technologist | 3 | 2 | 1 | 0 | 0 | |
| 35 | Computer Operator | 2 | 0 | 0 | 0 | 2 | |
| 36 | Deputy Librarian | 1 | 0 | 0 | 0 | 1 | |
| 37 | Stenotypist cum Computer Operators | 24 | 0 | 0 | 0 | 24 | |
| 38 | Sr. Pharmacist | 5 | 4 | 0 | 1 | 0 | |
| 39 | Sr. Lab Technician | 2 | 1 | 1 | 0 | 0 | |
| 40 | Dental Mechanic | 1 | 0 | 0 | 0 | 1 | |
| 41 | Programme Officer | 1 | 0 | 0 | 0 | 1 | |
| 42 | Pharmaceutical Chemist | 1 | 0 | 0 | 0 | 1 | |
| 43 | Staff Nurse | 215 | 61 | 69 | 123 | -38 | |
| 44 | Physiotherapist | 2 | 1 | 0 | 1 | 0 | |
| 45 | Health Educator | 1 | 0 | 0 | 0 | 1 | ಈ ಕಛೇರಿಯ ಪತ್ರ .ವಿಮ್ಸ್/ಸಿ(2)/131/2019-20 ದಿ:03.10.2019ರಲ್ಲಿ ಖಾಲಿ ಇರುವ ಹುದ್ದೆಗಳಿಗೆ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಿ ದಿ:23.12.2019ರಂದು ನಡೆದ ನೇರ ಸಂದರ್ಶನದ ಆಯ್ಕೆ ಪಟ್ಟಿಯನ್ನು ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ. |
| 46 | Artist-cum-Photographer | 1 | 1 | 0 | 0 | 0 | ಖಾಲಿ ಇರುವ ಹುದ್ದೆಗಳಲ್ಲಿ ಗುತ್ತಿಗೆ / ಮಿತಿ ವೇತನ/ಹೊರ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುತ್ತಾರೆ. |
| 47 | M.R.D. Technician | 5 | 2 | 3 | 1 | -1 | |
| 48 | Medico Social worker | 2 | 2 | 0 | 0 | 0 | |
| 49 | Senior Staff Nurse | 28 | 29 | 0 | 0 | -1 | |
| 50 | Office Supdt. | 9 | 9 | 0 | 0 | 0 | |
| 51 | Sr. Non. Med. Supervisor | 1 | 0 | 0 | 0 | 1 | |
| 52 | A.M.R.O. | 1 | 0 | 0 | 0 | 1 | |
| 53 | Social worker | 1 | 0 | 0 | 1 | 0 | |
| 54 | Dietician | 1 | 1 | 0 | 0 | 0 | |
| 55 | Nursing Supdt. Gr-II | 11 | 9 | 0 | 0 | 2 | |
| 56 | Librarian | 1 | 1 | 0 | 0 | 0 | |
| 57 | Public Relation Officer | 1 | 0 | 0 | 0 | 1 | |
| 58 | PCI | 1 | 1 | 0 | 0 | 0 | |
| 59 | Biomedical Engineer | 1 | 1 | 0 | 0 | 0 | |
| 60 | Audiologist cum Speech Therapist | 1 | 1 | 0 | 0 | 0 | |
| 61 | Statistician | 1 | 0 | 0 | 0 | 1 | |
| | **Rome Plan** | | | | | | |
| 1 | Drivers | 4 | 1 | 2 | 0 | 1 | |
| 2 | Stenographer | 1 | 0 | 0 | 0 | 1 | |
| | **DMOU** | | | | | | |
| 1 | Staff Nurse | 1 | 0 | 0 | 0 | 1 | |
| 2 | Opthalmic Asst. | 1 | 1 | 0 | 0 | 0 | |
| 3 | Drivers | 1 | 0 | 0 | 0 | 1 | |
| | **State Plan** | | | | | | |
| 1 | Staff Nurse | 2 | 0 | 0 | 0 | 2 | |
| 2 | Junior Lab Technician | 4 | 0 | 4 | 0 | 0 | |
| 3 | Sr. Lab Technician | 2 | 0 | 2 | 0 | 0 | |
| | Total of Group-C | 500 | 186 | 104 | 146 | 66 | |

vims Staff postn.09.07.1

Director,
VIMS, Bellary

| Sl. No. | Designation | Sanction | Working | | Vacant | Remarks |
|---|---|---|---|---|---|---|
| | | | Per | Cont | | |
| 1 | Daffedar | 1 | 0 | | 1 | ಖಾಲಿ ಇರುವ ಹುದ್ದೆಗಳಲ್ಲಿ ರ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುತ್ತಾರೆ. |
| 2 | Lit Attender | 4 | 1 | | 3 | |
| 3 | Library Attender | 1 | 0 | | 1 | |
| 4 | Lab. Attender | 28 | 1 | | 27 | |
| 5 | Attender | 26 | 3 | | 23 | |
| 6 | ~~Servant~~ | ~~30~~ | ~~4~~ | | ~~26~~ | |
| 7 | Dissection Cooli | 4 | 0 | | 4 | |
| 8 | Peons | 8 | 1 | | 7 | |
| 9 | Cycle Orderly | 3 | 0 | | 3 | |
| 10 | Sanitary Worker | 84 | 14 | | 70 | |
| 11 | Watchman | 17 | 2 | | 15 | |
| 12 | Cleaner cum Strecher bearer | 2 | 0 | | 2 | |
| 13 | Animal Care Taker | 1 | 0 | | 1 | |
| 14 | Mali | 1 | 1 | | 0 | |
| 15 | Ward boys | 82 | 3 | | 79 | |
| 16 | Ward Ayas | 3 | 0 | | 3 | |
| 17 | Attender-cum-sweeper | 1 | 0 | | 1 | |
| 18 | Wireman | 1 | 0 | 1 | 0 | |
| 19 | Dark room Assistant | 1 | 1 | | 0 | |
| 20 | Cook | 17 | 1 | | 16 | |
| 21 | Dhoby | 14 | 5 | | 9 | |
| 22 | Gardener | 2 | 0 | | 2 | |
| 23 | Barber | 2 | 0 | | 2 | |
| 24 | Table Boy | 1 | 0 | | 1 | |
| 25 | Mechanic | 1 | 0 | | 1 | |
| 26 | Cleaner | 2 | 0 | | 2 | |
| 27 | X-Ray Attender | 2 | 0 | | 2 | |
| 28 | Dresser | 1 | 0 | | 1 | |
| 29 | Pharmacy Attender | 6 | 0 | | 6 | |
| 30 | O.T. Attender | 5 | 0 | | 5 | |
| 31 | Animal Attendant | 2 | 0 | | 2 | |
| 32 | Attendants | 1 | 0 | | 1 | |
| 33 | Dafrics | 4 | 0 | | 4 | |
| 34 | Dissection hall attendant | 6 | 0 | | 6 | |
| 35 | Laboratory Attendants | 9 | 0 | | 9 | |
| 36 | Peons | 4 | 0 | | 4 | |
| 37 | Sweapers | 10 | 0 | | 10 | |
| | | | | | | |
| | Rome Plan | | | | | |
| 38 | Attender | 2 | 0 | | 2 | |
| 39 | Sarvent | 3 | 1 | | 2 | |
| 40 | Cleaner cum Peon | 4 | 0 | | 4 | |
| 41 | Cook cum helper | 3 | 0 | | 3 | |
| | Total of D | 399 | 38 | 1 | 360 | |

Director,
VIMS, Bellary

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 830 |
| ಸದಸ್ಯರ ಹೆಸರು | ಶ್ರೀ ಹೆಚ್.ಡಿ. ರೇವಣ್ಣ (ಹೊಳೆನರಸೀಪುರ), |
| ಉತ್ತರಿಸಬೇಕಾದ ದಿನಾಂಕ | **10.12.2020** |
| ಉತ್ತರಿಸಬೇಕಾದ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |

| | ಪ್ರಶ್ನೆ | ಉತ್ತರ |
|---|---|---|
| (ಅ) | ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಹೊಳೆನರಸೀಪುರ ಟೌನ್ ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜು 2006ರಲ್ಲಿ ಪ್ರಾರಂಭವಾಗಿ ಇಂದು ಸುಸಜ್ಜಿತ ಕಟ್ಟಡದೊಂದಿಗೆ ಗೃಹವಿಜ್ಞಾನ, ಬಿ.ಕಾಂ., ಮತ್ತು ಎಂ.ಕಾಂ., ಕೋರ್ಸುಗಳನ್ನು ಹೊಂದಿದ್ದು, ಗ್ರಾಮೀಣ ಪ್ರದೇಶದ ಸುಮಾರು 300ಕ್ಕೂ ಅಧಿಕ ಗ್ರಾಮೀಣ ಪ್ರದೇಶ ವಿದ್ಯಾರ್ಥಿನಿಯರು ಅಧ್ಯಯನ ಮಾಡುತ್ತಿರುವುದು ನಿಜವೇ; | ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಹೊಳೆನರಸೀಪುರ ಟೌನ್ ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜಿನಲ್ಲಿ 2020-21ನೇ ಸಾಲಿನಲ್ಲಿ ಇಲಾಖೆಯ ಇಎಂಐಎಸ್‌ನಲ್ಲಿರುವಂತೆ ಒಟ್ಟು 159 ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದಾರೆ. |
| (ಆ) | ಈ ಕಾಲೇಜು ಈಗಾಗಲೇ ನ್ಯಾಕ್ ಪ್ರಕ್ರಿಯೆಯ ಮೊದಲ ಮೌಲ್ಯಮಾಪನಕ್ಕೆ ಒಳಗಾಗಿದ್ದು 'ಸಿ' ಗ್ರೇಡ್‌ಗಳಿಸಿ ಕಾಲೇಜು ಶಿಕ್ಷಣ ಇಲಾಖೆಗೆ ಹೆಚ್ಚಿನ ಗೌರವ ತಂದಿದ್ದು, ಈಗಾಗಲೇ ಕಾಲೇಜಿನ ವಿವಿಧ ವಿಭಾಗಗಳು ರಾಷ್ಟ್ರ, ರಾಜ್ಯ, ವಿಶ್ವವಿದ್ಯಾನಿಲಯ ಮಟ್ಟದ ವಿಚಾರಣಾ ಸಂಕೀರಣಗಳನ್ನು ಆಯೋಜನೆ ಮಾಡುವ ಮೂಲಕ ಹಾಗೂ ಸ್ಪರ್ಧೆಗಳಲ್ಲಿ ಭಾಗವಹಿಸುವ ಮೂಲಕ ಉತ್ತಮ ಹೆಸರನ್ನು ಗಳಿಸಿ ಕಾಲೇಜು ಶಿಕ್ಷಣ ಇಲಾಖೆಗೆ ಗೌರವ ತಂದಿದ್ದು, ಪ್ರಸ್ತುತ ಎಂ.ಎಸ್.ಸಿ.(ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್), ಎಂ.ಎಸ್.ಸಿ. (ಮನಃಶಾಸ್ತ್ರ) ವಿಭಾಗಗಳಲ್ಲಿ ವ್ಯಾಸಂಗ ಮಾಡಲು ವಿದ್ಯಾರ್ಥಿನಿಯರು ಹೆಚ್ಚಿನ ಆಸಕ್ತಿ ಹೊಂದಿ ಪ್ರವೇಶಾತಿ ಹೊಂದಲು ಬಯಸುತ್ತಿರುವುದರಿಂದ ಸದರಿ ಕಾಲೇಜಿನಲ್ಲಿ ಎಂ.ಎಸ್.ಸಿ. (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್) ಎಂ.ಎಸ್.ಸಿ. (ಮನಃಶಾಸ್ತ್ರ) ವಿಭಾಗಗಳಲ್ಲಿ 2020-21ನೇ ಸಾಲಿನಿಂದ ಹೊಸದಾಗಿ ಪ್ರಾರಂಭಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರಿ ಗೃಹ ವಿಜ್ಞಾನ ಕಾಲೇಜು, ಹೊಳೆನರಸೀಪುರ ಇಲ್ಲಿ ಹೊಸ ಕೋರ್ಸುಗಳಾದ ಎಂ.ಎಸ್ಸಿ (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್), ಎಂ.ಎಸ್ಸಿ (ಮನಃಶಾಸ್ತ್ರ) ಪ್ರಾರಂಭಿಸಲು ಹಾಗೂ ಎಂ.ಕಾಂ ಸ್ನಾತಕೋತ್ತರ ವಿಭಾಗದಲ್ಲಿ ಹಾಲಿ ಇರುವ 30 ವಿದ್ಯಾರ್ಥಿಗಳ ಪ್ರವೇಶಾತಿಯನ್ನು 60ಕ್ಕೆ ಹೆಚ್ಚಿಸಲು ಮಂಜೂರು ನೀಡುವಂತೆ ಕೋರಿರುತ್ತಾರೆ.<br>ಸರ್ಕಾರಿ ಆದೇಶ ಸಂಖ್ಯೆ: ಇಡಿ/34/ಇಜಿಒವಿ/2020(ಭಾಗ-2), ದಿನಾಂಕ:22-6-2020 ರಲ್ಲಿ ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ ಬರುವ ಸಂಯೋಜಿತ ಕಾಲೇಜುಗಳಿಗೆ 2019-20ನೇ ಸಾಲಿನಲ್ಲಿ ಸಂಯೋಜನಾ ಪ್ರಕ್ರಿಯೆ ಕೈಗೊಂಡು 2020-21ನೇ ಸಾಲಿನ Opening New Colleges, Extension of existing Affiliation, Continuation of Affiliation, Permanent Affiliation, Change/Addition of Subject, Division of Faculty, Increase of intake, change of name, Closure & withdrawal of a College, Local Inquiry committee formation and Transfer of Management ಮುಂತಾದ ಕಾರ್ಯ ಚಟುವಟಿಕೆಗಳಿಗೆ ಅನುಮೋದನೆ ಆನ್ ಲೈನ್ ತಂತ್ರಾಂಶದ ಮುಖಾಂತರವೇ ಅರ್ಜಿಗಳನ್ನು ಆಹ್ವಾನಿಸಲು ಹಾಗೂ ಭರ್ತಿ ಮಾಡಿರುವ ಅರ್ಜಿಗಳಲ್ಲಿ ಅಳವಡಿಸಿರುವ ಮಾಹಿತಿಗಳನ್ನು ವಿಶ್ವವಿದ್ಯಾಲಯವು ನೇಮಿಸುವ ಸ್ಥಳೀಯ ವಿಚಾರಣಾ ಸಮಿತಿಯು ಪರಾಮರ್ಶಿಸಿ, ಶಿಫಾರಸ್ಸನ್ನು ಆನ್ ಲೈನ್ ಮುಖಾಂತರವೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಕ್ರಮವಹಿಸುವಂತೆ ಆದೇಶಿಸಲಾಗಿದೆ.<br><br>ಈ ಹಿನ್ನೆಲೆಯಲ್ಲಿ ಸದರಿ ಕಾಲೇಜಿನಲ್ಲಿ ಹೊಸದಾಗಿ |
| ಇ) | ಅಲ್ಲದೇ, ಸದರಿ ಕಾಲೇಜಿನಲ್ಲಿ ಎಂ.ಕಾಂ. ವಿಭಾಗದಲ್ಲಿ 30 ಸೀಟುಗಳು | |

| | | |
|---|---|---|
| | ಮಂಜೂರಾಗಿದ್ದು, ಎಂ.ಕಾಂ., ವಿಭಾಗಕ್ಕೆ ಪ್ರವೇಶಾತಿ ಹೊಂದಲು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿನಿಯರು ಉತ್ಸುಕರಾಗಿರುವುದರಿಂದ 30 ಸೀಟುಗಳ ಜೊತೆಗೆ ಹೆಚ್ಚುವರಿಯಾಗಿ 60 ಸೀಟುಗಳನ್ನು ಮಂಜೂರು ಮಾಡಲು ಈಗಾಗಲೇ ಕುಲಸಚಿವರು ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಾರಂಭಿಸಲಿರುವ ಎಂ.ಎಸ್ಸಿ (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್) ಎಂ.ಎಸ್ಸಿ (ಮನಃಶಾಸ್ತ್ರ) ಹಾಗೂ ಎಂ.ಕಾಂ ಸ್ನಾತಕೋತ್ತರ ವಿಭಾಗದಲ್ಲಿ ಹಾಲಿ ಇರುವ 30 ವಿದ್ಯಾರ್ಥಿಗಳ ಪ್ರವೇಶಾತಿಯನ್ನು 60ಕ್ಕೆ ಹೆಚ್ಚಿಸಲು ಆನ್‌ಲೈನ್ ತಂತ್ರಾಂಶದ ಮುಖಾಂತರ ಸಂಬಂಧಿಸಿದ ವಿಶ್ವವಿದ್ಯಾಲಯಕ್ಕೆ ಅರ್ಜಿ ಸಲ್ಲಿಸುವಂತೆ ಸದರಿ ಕಾಲೇಜಿನ ಪ್ರಾಂಶುಪಾಲರಿಗೆ ಪತ್ರದ ಮೂಲಕ ಸೂಚಿಸಲಾಗಿದೆ. |
| ಈ) | ಗ್ರಾಮೀಣ ಪ್ರದೇಶದ ಬಡಕುಟುಂಬದ ವಿದ್ಯಾರ್ಥಿನಿಯರ ಹಿತದೃಷ್ಟಿಯಿಂದ ಹಾಸನ ಜಿಲ್ಲೆ ಹೊಳೆನರಸೀಪುರ ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜಿಗೆ ಹೊಸದಾಗಿ ಎಂ.ಎಸ್.ಸಿ. (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್), ಎಂ.ಎಸ್.ಸಿ. (ಮನಃಶಾಸ್ತ್ರ) ವಿಭಾಗಗಳನ್ನು 2020-21ನೇ ಸಾಲಿನಿಂದ ಪ್ರಾರಂಭಿಸಲು ಅನುಮತಿ ನೀಡಲು ಹಾಗೂ ಸದರಿ ಕಾಲೇಜಿನಲ್ಲಿ ಪ್ರಸ್ತುತ ಎಂ.ಕಾಂ. ವಿಭಾಗದಲ್ಲಿ 30 ಸೀಟುಗಳು ಮಂಜೂರಾಗಿದ್ದು, ಹೆಚ್ಚುವರಿಯಾಗಿ 60 ಸೀಟುಗಳನ್ನು 2020-21ನೇ ಶೈಕ್ಷಣಿಕ ಸಾಲಿನಿಂದ ಮಂಜೂರು ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜು, ಹೊಳೆನರಸೀಪುರ ಇಲ್ಲಿ ಹೊಸದಾಗಿ ಎಂ.ಎಸ್.ಸಿ(ಪುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್) ಎಂ.ಎಸ್.ಸಿ (ಮನಃಶಾಸ್ತ್ರ) ವಿಭಾಗಗಳನ್ನು 2020-21ನೇ ಸಾಲಿನಿಂದ ಪ್ರಾರಂಭಿಸಲು ಹಾಗೂ ಎಂ.ಕಾಂ ವಿಭಾಗದಲ್ಲಿ ಪ್ರಸ್ತುತ ಇರುವ 30 ಸೀಟುಗಳಿಗೆ ಹೆಚ್ಚುವರಿಯಾಗಿ 60 ಸೀಟುಗಳಿಗೆ ಹೆಚ್ಚಿಸಲು ಸರ್ಕಾರದ ಆದೇಶ ಸಂಖ್ಯೆ:ಇಡಿ/34/ಇಜಿಓವಿ/2020 ಭಾಗ-2, ದಿನಾಂಕ:22-6-2020ರ ಆದೇಶದಂತೆ ಆನ್ ಲೈನ್ ತಂತ್ರಾಂಶದ ಮುಖಾಂತರ ವಿಶ್ವವಿದ್ಯಾಲಯಕ್ಕೆ ಪ್ರಸ್ತಾವನೆ ಸಲ್ಲಿಸುವಂತೆ ಸೂಚಿಸಲಾಗಿರುತ್ತದೆ. ಈ ಸಂಬಂಧ, ಸದರಿ ಕೋರ್ಸುಗಳನ್ನು ಪ್ರಾರಂಭಿಸುವುದು ಹಾಗೂ ಎಂ.ಕಾಂ ಹೆಚ್ಚುವರಿ ಸೀಟುಗಳನ್ನು ಮಂಜೂರು ಮಾಡಲು ವಿಶ್ವವಿದ್ಯಾಲಯದ ಸಂಯೋಜನೆಯ ಮಾರ್ಗಸೂಚಿಯಂತೆ ಕ್ರಮವಹಿಸಲಾಗುವುದು. |
| ಉ) | ಹೊಳೇನರಸೀಪುರ ಟೌನ್ ಸರ್ಕಾರಿ ಮಹಿಳಾ ಗೃಹವಿಜ್ಞಾನ ಕಾಲೇಜಿನಲ್ಲಿ ಖಾಲಿ ಇರುವ ಗ್ರೂಪ್ 'ಡಿ' ನೌಕರರ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಆಯುಕ್ತರ ಪತ್ರ ಸಂಖ್ಯೆ: 168/ಹೋಹುಅ/2019-20/ನೇ.ವಿ-1/ ಬೆಂಗಳೂರು, ದಿನಾಂಕ: 04.02.2020ರಲ್ಲಿ ಅನುಮತಿ ನೀಡಿರುವುದು ನಿಜವೇ; ಹಾಗಿದ್ದಲ್ಲಿ, ಹೊರಗುತ್ತಿಗೆಯವರ ಕನಿಷ್ಠ ವೇತನ ಪಾವತಿಸಲು ಅನುದಾನ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಹೊಳೆನರಸೀಪುರ ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜಿನಲ್ಲಿ ಖಾಲಿ ಇರುವ ಗ್ರೂಪ್-ಡಿ ನೌಕರರ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಆಯುಕ್ತಾಲಯದ ಅಧಿಕೃತ ಜ್ಞಾಪನ ಸಂಖ್ಯೆ:ಕಾಶಿಇ/168/ ಹೊಗುಅ/2019-20/ನೇವಿ-1, ದಿನಾಂಕ:04.02.2020 ರಲ್ಲಿ ಅನುಮತಿ ನೀಡಿರುವುದಿಲ್ಲ |

**ಇಡಿ 225 ಡಿಸಿಇ 2020**

(ಡಾ. ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 830 |
| ಸದಸ್ಯರ ಹೆಸರು | ಶ್ರೀ ಹೆಚ್.ಡಿ. ರೇವಣ್ಣ (ಹೊಳೆನರಸೀಪುರ), |
| ಉತ್ತರಿಸಬೇಕಾದ ದಿನಾಂಕ | **10.12.2020** |
| ಉತ್ತರಿಸಬೇಕಾದ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |

| | ಪ್ರಶ್ನೆ | ಉತ್ತರ |
|---|---|---|
| (ಅ) | ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಹೊಳೆನರಸೀಪುರ ಟೌನ್ ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜು 2006ರಲ್ಲಿ ಪ್ರಾರಂಭವಾಗಿ ಇಂದು ಸುಸಜ್ಜಿತ ಕಟ್ಟಡದೊಂದಿಗೆ ಗೃಹವಿಜ್ಞಾನ, ಬಿ.ಕಾಂ., ಮತ್ತು ಎಂ.ಕಾಂ., ಕೋರ್ಸುಗಳನ್ನು ಹೊಂದಿದ್ದು, ಗ್ರಾಮೀಣ ಪ್ರದೇಶದ ಸುಮಾರು 300ಕ್ಕೂ ಅಧಿಕ ಗ್ರಾಮೀಣ ಪ್ರದೇಶ ವಿದ್ಯಾರ್ಥಿನಿಯರು ಅಧ್ಯಯನ ಮಾಡುತ್ತಿರುವುದು ನಿಜವೇ; | ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಹೊಳೆನರಸೀಪುರ ಟೌನ್ ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜಿನಲ್ಲಿ 2020-21ನೇ ಸಾಲಿನಲ್ಲಿ ಇಲಾಖೆಯ ಇಎಂಐಎಸ್‌ನಲ್ಲಿರುವಂತೆ ಒಟ್ಟು 159 ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದಾರೆ. |
| (ಆ) | ಈ ಕಾಲೇಜು ಈಗಾಗಲೇ ನ್ಯಾಕ್ ಪ್ರಕ್ರಿಯೆಯ ಮೊದಲ ಮೌಲ್ಯಮಾಪನಕ್ಕೆ ಒಳಗಾಗಿದ್ದು 'ಸಿ' ಗ್ರೇಡ್‌ಗಳಿಸಿ ಕಾಲೇಜು ಶಿಕ್ಷಣ ಇಲಾಖೆಗೆ ಹೆಚ್ಚಿನ ಗೌರವ ತಂದಿದ್ದು, ಈಗಾಗಲೇ ಕಾಲೇಜಿನ ವಿವಿಧ ವಿಭಾಗಗಳು ರಾಷ್ಟ್ರ, ರಾಜ್ಯ, ವಿಶ್ವವಿದ್ಯಾನಿಲಯ ಮಟ್ಟದ ವಿಚಾರಣಾ ಸಂಕೀರಣಗಳನ್ನು ಆಯೋಜನೆ ಮಾಡುವ ಮೂಲಕ ಹಾಗೂ ಸ್ಪರ್ಧೆಗಳಲ್ಲಿ ಭಾಗವಹಿಸುವ ಮೂಲಕ ಉತ್ತಮ ಹೆಸರನ್ನು ಗಳಿಸಿ ಕಾಲೇಜು ಶಿಕ್ಷಣ ಇಲಾಖೆಗೆ ಗೌರವ ತಂದಿದ್ದು, ಪ್ರಸ್ತುತ ಎಂ.ಎಸ್.ಸಿ.(ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್), ಎಂ.ಎಸ್.ಸಿ. (ಮನಃಶಾಸ್ತ್ರ) ವಿಭಾಗಗಳಲ್ಲಿ ವ್ಯಾಸಂಗ ಮಾಡಲು ವಿದ್ಯಾರ್ಥಿನಿಯರು ಹೆಚ್ಚಿನ ಆಸಕ್ತಿ ಹೊಂದಿ ಪ್ರವೇಶಾತಿ ಹೊಂದಲು ಬಯಸುತ್ತಿರುವುದರಿಂದ ಸದರಿ ಕಾಲೇಜಿನಲ್ಲಿ ಎಂ.ಎಸ್.ಸಿ. (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್) ಎಂ.ಎಸ್.ಸಿ. (ಮನಃಶಾಸ್ತ್ರ) ವಿಭಾಗಗಳಲ್ಲಿ 2020-21ನೇ ಸಾಲಿನಿಂದ ಹೊಸದಾಗಿ ಪ್ರಾರಂಭಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರಿ ಗೃಹ ವಿಜ್ಞಾನ ಕಾಲೇಜು, ಹೊಳೆನರಸೀಪುರ ಇಲ್ಲಿ ಹೊಸ ಕೋರ್ಸುಗಳಾದ ಎಂ.ಎಸ್ಸಿ (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್), ಎಂ.ಎಸ್ಸಿ (ಮನಃಶಾಸ್ತ್ರ) ಪ್ರಾರಂಭಿಸಲು ಹಾಗೂ ಎಂ.ಕಾಂ ಸ್ನಾತಕೋತ್ತರ ವಿಭಾಗದಲ್ಲಿ ಹಾಲಿ ಇರುವ 30 ವಿದ್ಯಾರ್ಥಿಗಳ ಪ್ರವೇಶಾತಿಯನ್ನು 60ಕ್ಕೆ ಹೆಚ್ಚಿಸಲು ಮಂಜೂರು ನೀಡುವಂತೆ ಕೋರಿರುತ್ತಾರೆ.<br>ಸರ್ಕಾರಿ ಆದೇಶ ಸಂಖ್ಯೆ: ಇಡಿ/34/ಇಜಿಒವಿ/2020(ಭಾಗ-2), ದಿನಾಂಕ:22-6-2020 ರಲ್ಲಿ ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ ಬರುವ ಸಂಯೋಜಿತ ಕಾಲೇಜುಗಳಿಗೆ 2019-20ನೇ ಸಾಲಿನಲ್ಲಿ ಸಂಯೋಜನಾ ಪ್ರಕ್ರಿಯೆ ಕೈಗೊಂಡು 2020-21ನೇ ಸಾಲಿನ Opening New Colleges, Extension of existing Affiliation, Continuation of Affiliation, Permanent Affiliation, Change/Addition of Subject, Division of Faculty, Increase of intake, change of name, Closure & withdrawal of a College, Local Inquiry committee formation and Transfer of Management ಮುಂತಾದ ಕಾರ್ಯ ಚಟುವಟಿಕೆಗಳಿಗೆ ಅನುಮೋದನೆ ಆನ್ ಲೈನ್ ತಂತ್ರಾಂಶದ ಮುಖಾಂತರವೇ ಅರ್ಜಿಗಳನ್ನು ಆಹ್ವಾನಿಸಲು ಹಾಗೂ ಭರ್ತಿ ಮಾಡಿರುವ ಅರ್ಜಿಗಳಲ್ಲಿ ಅಳವಡಿಸಿರುವ ಮಾಹಿತಿಗಳನ್ನು ವಿಶ್ವವಿದ್ಯಾಲಯವು ನೇಮಿಸುವ ಸ್ಥಳೀಯ ವಿಚಾರಣಾ ಸಮಿತಿಯು ಪರಾಮರ್ಶಿಸಿ, ಶಿಫಾರಸ್ಸನ್ನು ಅನ್ ಲೈನ್ ಮುಖಾಂತರವೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಕ್ರಮವಹಿಸುವಂತೆ ಆದೇಶಿಸಲಾಗಿದೆ. |
| ಇ) | ಅಲ್ಲದೇ, ಸದರಿ ಕಾಲೇಜಿನಲ್ಲಿ ಎಂ.ಕಾಂ. ವಿಭಾಗದಲ್ಲಿ 30 ಸೀಟುಗಳು | ಈ ಹಿನ್ನೆಲೆಯಲ್ಲಿ ಸದರಿ ಕಾಲೇಜಿನಲ್ಲಿ ಹೊಸದಾಗಿ |

| | | |
|---|---|---|
| | ಮಂಜೂರಾಗಿದ್ದು, ಎಂ.ಕಾಂ., ವಿಭಾಗಕ್ಕೆ ಪ್ರವೇಶಾತಿ ಹೊಂದಲು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿನಿಯರು ಉತ್ಸುಕರಾಗಿರುವುದರಿಂದ 30 ಸೀಟುಗಳ ಜೊತೆಗೆ ಹೆಚ್ಚುವರಿಯಾಗಿ 60 ಸೀಟುಗಳನ್ನು ಮಂಜೂರು ಮಾಡಲು ಈಗಾಗಲೇ ಕುಲಸಚಿವರು ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಾರಂಭಿಸಲಿರುವ ಎಂ.ಎಸ್ಸಿ (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್) ಎಂ.ಎಸ್ಸಿ (ಮನಃಶಾಸ್ತ್ರ) ಹಾಗೂ ಎಂ.ಕಾಂ ಸ್ನಾತಕೋತ್ತರ ವಿಭಾಗದಲ್ಲಿ ಹಾಲಿ ಇರುವ 30 ವಿದ್ಯಾರ್ಥಿಗಳ ಪ್ರವೇಶಾತಿಯನ್ನು 60ಕ್ಕೆ ಹೆಚ್ಚಿಸಲು ಆನ್‌ಲೈನ್ ತಂತ್ರಾಂಶದ ಮುಖಾಂತರ ಸಂಬಂಧಿಸಿದ ವಿಶ್ವವಿದ್ಯಾಲಯಕ್ಕೆ ಅರ್ಜಿ ಸಲ್ಲಿಸುವಂತೆ ಸದರಿ ಕಾಲೇಜಿನ ಪ್ರಾಂಶುಪಾಲರಿಗೆ ಪತ್ರದ ಮೂಲಕ ಸೂಚಿಸಲಾಗಿದೆ. |
| ಈ) | ಗ್ರಾಮೀಣ ಪ್ರದೇಶದ ಬಡಕುಟುಂಬದ ವಿದ್ಯಾರ್ಥಿನಿಯರ ಹಿತದೃಷ್ಟಿಯಿಂದ ಹಾಸನ ಜಿಲ್ಲೆ ಹೊಳೆನರಸೀಪುರ ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜಿಗೆ ಹೊಸದಾಗಿ ಎಂ.ಎಸ್.ಸಿ. (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್), ಎಂ.ಎಸ್.ಸಿ. (ಮನಃಶಾಸ್ತ್ರ) ವಿಭಾಗಗಳನ್ನು 2020-21ನೇ ಸಾಲಿನಿಂದ ಪ್ರಾರಂಭಿಸಲು ಅನುಮತಿ ನೀಡಲು ಹಾಗೂ ಸದರಿ ಕಾಲೇಜಿನಲ್ಲಿ ಪ್ರಸ್ತುತ ಎಂ.ಕಾಂ. ವಿಭಾಗದಲ್ಲಿ 30 ಸೀಟುಗಳು ಮಂಜೂರಾಗಿದ್ದು, ಹೆಚ್ಚುವರಿಯಾಗಿ 60 ಸೀಟುಗಳನ್ನು 2020-21ನೇ ಶೈಕ್ಷಣಿಕ ಸಾಲಿನಿಂದ ಮಂಜೂರು ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜು, ಹೊಳೆನರಸೀಪುರ ಇಲ್ಲಿ ಹೊಸದಾಗಿ ಎಂ.ಎಸ್.ಸಿ(ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್) ಎಂ.ಎಸ್.ಸಿ (ಮನಃಶಾಸ್ತ್ರ) ವಿಭಾಗಗಳನ್ನು 2020-21ನೇ ಸಾಲಿನಿಂದ ಪ್ರಾರಂಭಿಸಲು ಹಾಗೂ ಎಂ.ಕಾಂ ವಿಭಾಗದಲ್ಲಿ ಪ್ರಸ್ತುತ ಇರುವ 30 ಸೀಟುಗಳಿಗೆ ಹೆಚ್ಚುವರಿಯಾಗಿ 60 ಸೀಟುಗಳಿಗೆ ಹೆಚ್ಚಿಸಲು ಸರ್ಕಾರದ ಆದೇಶ ಸಂಖ್ಯೆ:ಇಡಿ/34/ಇಜಿಓವಿ/2020 ಭಾಗ-2, ದಿನಾಂಕ:22-6-2020ರ ಆದೇಶದಂತೆ ಆನ್ ಲೈನ್ ತಂತ್ರಾಂಶದ ಮುಖಾಂತರ ವಿಶ್ವವಿದ್ಯಾಲಯಕ್ಕೆ ಪ್ರಸ್ತಾವನೆ ಸಲ್ಲಿಸುವಂತೆ ಸೂಚಿಸಲಾಗಿರುತ್ತದೆ. ಈ ಸಂಬಂಧ, ಸದರಿ ಕೋರ್ಸುಗಳನ್ನು ಪ್ರಾರಂಭಿಸುವುದು ಹಾಗೂ ಎಂ.ಕಾಂ ಹೆಚ್ಚುವರಿ ಸೀಟುಗಳನ್ನು ಮಂಜೂರು ಮಾಡಲು ವಿಶ್ವವಿದ್ಯಾಲಯದ ಸಂಯೋಜನೆಯ ಮಾರ್ಗಸೂಚಿಯಂತೆ ಕ್ರಮವಹಿಸಲಾಗುವುದು. |
| ಉ) | ಹೊಳೇನರಸೀಪುರ ಟೌನ್ ಸರ್ಕಾರಿ ಮಹಿಳಾ ಗೃಹವಿಜ್ಞಾನ ಕಾಲೇಜಿನಲ್ಲಿ ಖಾಲಿ ಇರುವ ಗ್ರೂಪ್ 'ಡಿ' ನೌಕರರ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಆಯುಕ್ತರ ಪತ್ರ ಸಂಖ್ಯೆ: 168/ಹೋಹುಅ/2019-20/ನೇ.ವಿ-1/ ಬೆಂಗಳೂರು, ದಿನಾಂಕ: 04.02.2020ರಲ್ಲಿ ಅನುಮತಿ ನೀಡಿರುವುದು ನಿಜವೇ; ಹಾಗಿದ್ದಲ್ಲಿ, ಹೊರಗುತ್ತಿಗೆಯವರ ಕನಿಷ್ಠ ವೇತನ ಪಾವತಿಸಲು ಅನುದಾನ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಹೊಳೆನರಸೀಪುರ ಸರ್ಕಾರಿ ಮಹಿಳಾ ಗೃಹ ವಿಜ್ಞಾನ ಕಾಲೇಜಿನಲ್ಲಿ ಖಾಲಿ ಇರುವ ಗ್ರೂಪ್-ಡಿ ನೌಕರರ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಆಯುಕ್ತಾಲಯದ ಅಧಿಕೃತ ಜ್ಞಾಪನ ಸಂಖ್ಯೆ:ಕಾಶಿಇ/168/ ಹೊಗುಅ/2019-20/ನೇವಿ-1, ದಿನಾಂಕ:04.02.2020 ರಲ್ಲಿ ಅನುಮತಿ ನೀಡಿರುವುದಿಲ್ಲ. |

**ಇಡಿ 225 ಡಿಸಿಇ 2020**

(ಡಾ. ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 143 |
| ಮಾನ್ಯ ಸದಸ್ಯರ ಹೆಸರು | ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) |
| ಉತ್ತರಿಸಬೇಕಾದ ದಿನಾಂಕ | 10.12.2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಾಗರ ಪಟ್ಟಣದಲ್ಲಿರುವ ಸರ್ಕಾರಿ ಸಾರ್ವಜನಿಕ ವಿಭಾಗೀಯ ಆಸ್ಪತ್ರೆಯಲ್ಲಿ 20 ಆಕ್ಸಿಜನ್ ಸಿಲಿಂಡರ್‌ಗಳ ಮತ್ತು ಆಕ್ಸಿಜನ್ ಘಟಕದಲ್ಲಿ ಸಿಬ್ಬಂದಿಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಸ್ತುತ ಸಾಗರ ಸಾರ್ವಜನಿಕ ಆಸ್ಪತ್ರೆಯಲ್ಲಿ 60 ಆಕ್ಸಿಜನ್ ಸಿಲಿಂಡರ್‌ಗಳು ಲಭ್ಯವಿರುತ್ತದೆ.<br>ಪ್ರಸ್ತುತ ಲಭ್ಯವಿರುವ ಸಿಬ್ಬಂದಿಗಳಿಗೆ ಆಕ್ಸಿಜನ್ ಘಟಕವನ್ನು ನಿರ್ವಹಿಸಲು ತರಬೇತಿ ನೀಡಲಾಗಿದೆ. ಆದ್ದರಿಂದ ಆಕ್ಸಿಜನ್ ಘಟಕದಲ್ಲಿ ಸಿಬ್ಬಂದಿಗಳ ಕೊರತೆ ಇರುವುದಿಲ್ಲ. |
| ಆ) | ಸದರಿ ಆಸ್ಪತ್ರೆಯಲ್ಲಿ ರೋಗಿಗಳು ಹೆಚ್ಚಾಗಿದ್ದು ಚಿಕಿತ್ಸೆ ಪಡೆಯಲು ತುಂಬಾ ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಸರ್ಕಾರಿ ಆಸ್ಪತ್ರೆಯಲ್ಲಿ ಕೊರತೆ ಇರುವ ಆಕ್ಸಿಜನ್ ಸಿಲಿಂಡರ್‌ಗಳನ್ನು ನೀಡಲು ಮತ್ತು ಕೊರತೆ ಇರುವ ಅಗತ್ಯ ಸಿಬ್ಬಂದಿಗಳನ್ನು ನಿಯೋಜಿಸಲು ಸರ್ಕಾರಕ್ಕೆ ಇರುವ ತೊಂದರೆಗಳೇನು; | ಅನ್ವಯಿಸುವುದಿಲ್ಲ. |
| ಈ) | ಈ ಆಸ್ಪತ್ರೆಗೆ 20 ಆಕ್ಸಿಜನ್ ಸಿಲಿಂಡರ್‌ಗಳನ್ನು ಒದಗಿಸಲು ಮತ್ತು ಸಂಬಂಧಿಸಿದ ಸಿಬ್ಬಂದಿಗಳನ್ನು ನಿಯೋಜಿಸಲು ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | ಈಗಾಗಲೇ 60 ಆಕ್ಸಿಜನ್ ಸಿಲಿಂಡರ್‌ಗಳು ಲಭ್ಯವಿರುತ್ತದೆ.<br>ಆಕ್ಸಿಜನ್ ಸಿಲಿಂಡರ್‌ಗಳ ಅವಶ್ಯಕತೆಗೆ ಅನುಗುಣವಾಗಿ ಖರೀದಿ ಮಾಡಲು ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಸಮಿತಿಯನ್ನು ರಚಿಸಲಾಗಿದ್ದು, ವಿಕೋಪ ನಿಧಿಯಡಿ ಲಭ್ಯವಿರುವ ಅನುದಾನದಲ್ಲಿ ವೆಚ್ಚ ಭರಿಸಲು ಕ್ರಮವಹಿಸಲಾಗಿದೆ.<br><br>ಸಿಬ್ಬಂದಿಯನ್ನು ಎರವಲು ಆಧಾರದ ಮೇಲೆ ಬಳಸಿಕೊಳ್ಳಲಾಗುತ್ತಿದ್ದು, ಪ್ರಸ್ತುತ ಲಭ್ಯವಿರುವ ಸಿಬ್ಬಂದಿಗಳಿಗೆ ಆಕ್ಸಿಜನ್ ಘಟಕವನ್ನು ನಿರ್ವಹಿಸಲು ತರಬೇತಿ ನೀಡಲಾಗಿದೆ. |

ಸಂಖ್ಯೆ : ಆಕುಕ 80 ಹೆಚ್ಎಸ್‌ಡಿ 2020

(ಡಾ.ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 816

ಮಾನ್ಯ ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ)

ಉತ್ತರಿಸುವ ದಿನಾಂಕ: : 10.12.2020

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ)

| | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗೇಪಲ್ಲಿ ತಾಲ್ಲೂಕಿನಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ನಡೆಯುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ; ಅಲ್ಲಿ ಯಾವ ಯಾವ ಕೋರ್ಸ್‌ಗಳ ವ್ಯಾಸಂಗ ನಡೆಸಲಾಗುತ್ತಿದೆ ; | ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕಿನಲ್ಲಿ ಒಂದು ಸರ್ಕಾರಿ ಪಾಲಿಟೆಕ್ನಿಕ್ ಕಾರ್ಯನಿರ್ವಹಿಸುತ್ತಿದ್ದು, ಸದರಿ ಕಾಲೇಜಿನಲ್ಲಿ ಪ್ರಸ್ತುತ 4 ಕೋರ್ಸ್‌ಗಳನ್ನು ನಡೆಸಲಾಗುತ್ತಿದ್ದು, ವಿವರ ಈ ಕೆಳಕಂಡಂತಿದೆ.<br>(1) ಆಟೋಮೊಬೈಲ್ ಇಂಜಿನಿಯರಿಂಗ್<br>(2) ಕಂಪ್ಯೂಟರ್ ಸೈನ್ಸ್ & ಇಂಜಿನಿಯರಿಂಗ್<br>(3) ಎಲೆಕ್ಟ್ರಾನಿಕ್ಸ್ & ಕಮ್ಯೂನಿಕೇಷನ್ ಇಂಜಿನಿಯರಿಂಗ್<br>(4) ಮೆಕ್ಯಾನಿಕಲ್ ಇಂಜಿನಿಯರಿಂಗ್ |
| ಆ | ಈ ಕಾಲೇಜಿಗೆ ಕಾಲೇಜು ಮೇಲುಸ್ತುವಾರಿ ಸಮಿತಿಯ ರಚನೆ ಮಾಡಲಾಗಿದೆಯೇ? ಹಾಗಿದ್ದಲ್ಲಿ ಯಾವಾಗ ರಚಿಸಲಾಗಿದೆ ಸಮಿತಿಯ ಅಧ್ಯಕ್ಷರು ಯಾರು? | ತಾಂತ್ರಿಕ ಶಿಕ್ಷಣ ಇಲಾಖೆಯಡಿ ಬರುವ ಸರ್ಕಾರಿ ಪಾಲಿಟೆಕ್ನಿಕ್‌ಗಳನ್ನು ಪ್ರಾಂಶುಪಾಲರ ಮೇಲುಸ್ತುವಾರಿಯಲ್ಲಿ ನಡೆಸಲಾಗುತ್ತಿದೆ. |
| ಇ | ಕಳೆದ 03 ವರ್ಷಗಳಲ್ಲಿ ಎಲ್ಲಾ ಯೋಜನೆಗಳಡಿಯಲ್ಲಿ ಕಾಲೇಜ್‌ಗೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ ; ಯಾವುದಕ್ಕಾಗಿ ವೆಚ್ಚ ಮಾಡಲಾಗಿದೆ ; (ವಿವರ ನೀಡುವುದು) | ಸರ್ಕಾರಿ ಪಾಲಿಟೆಕ್ನಿಕ್, ಬಾಗೇಪಲ್ಲಿಗೆ ಕಳೆದ 03 ವರ್ಷಗಳಲ್ಲಿ ಬಿಡುಗಡೆ ಮಾಡಲಾದ ಅನುದಾನ ವಿವರ ಇಂತಿದೆ.<br>(ರೂ. ಲಕ್ಷಗಳಲ್ಲಿ) |

| ವರ್ಷ | ವೇತನ | | ಅರೆಕಾಲಿಕ ಉಪನ್ಯಾಸಕರ ಭತ್ಯೆ, ಕಛೇರಿ ವೆಚ್ಚ, ವಿದ್ಯುತ್-ನೀರು-ದೂರವಾಣಿ ವೆಚ್ಚಗಳಿಗೆ | | ಯಂತ್ರೋಪಕರ ಣಖರೀದಿಗಾಗಿ | | ಒಟ್ಟು | |
|---|---|---|---|---|---|---|---|---|
| | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ |
| 2020-21 | 270.00 | 270.00 | 3.90 | 2.52 | -- | -- | 273.9 | 272.52 |
| 2019-20 | 324.00 | 324.00 | 6.90 | 6.56 | 9.81 | 9.81 | 340.71 | 340.37 |
| 2018-19 | 288.00 | 288.00 | 11.07 | 8.94 | -- | -- | 299.07 | 296.94 |

| | | |
|---|---|---|
| ಈ | ಹಣ ವೆಚ್ಚ ಮಾಡಲು ಪ್ರಾಂಶುಪಾಲರಿಗೆ ಅಧಿಕಾರ ನೀಡಲಾಗಿದೆಯೇ ; ಹಣ ವೆಚ್ಚ ಮಾಡಲು ಯಾರ ಅನುಮತಿಯ ಅವಶ್ಯಕತೆ ಇರುತ್ತದೆ? (ವಿವರ ನೀಡುವುದು) | ಆರ್ಥಿಕ ಇಲಾಖೆಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯಂತೆ ಸಂಸ್ಥೆಗೆ ಬಿಡುಗಡೆ ಮಾಡಲಾದ ಅನುದಾನದಲ್ಲಿ ನಿಯಮಾನುಸಾರ ವೆಚ್ಚ ಭರಿಸಲು ಪ್ರಾಂಶುಪಾಲರುಗಳಿಗೆ ಅಧಿಕಾರವಿದೆ. ಪ್ರಾಂಶುಪಾಲರ ಆರ್ಥಿಕ ಅಧಿಕಾರಕ್ಕಿಂತ ಹೆಚ್ಚಿನ ಅನುದಾನ ವೆಚ್ಚ ಮಾಡಲು ಇಲಾಖಾ ಮುಖ್ಯಸ್ಥರ ಅನುಮತಿ ಅವಶ್ಯವಿರುತ್ತದೆ.<br>ಸರ್ಕಾರದ ಆದೇಶ ಸಂಖ್ಯೆ: ಆಇ 03 ಟಿಎಫ್‌ಪಿ 2018, ಬೆಂಗಳೂರು, ದಿನಾಂಕ 14.05.2018 ರಲ್ಲಿ ಆರ್ಥಿಕ ಅಧಿಕಾರ ಪ್ರತ್ಯಾಯೋಜಿಸಲಾಗಿದೆ. |

**ಇಡಿ 138 ಟಿಪಿಇ 2020**

**(ಡಾ. ಅಶ್ವಥ್ ನಾರಾಯಣ ಸಿ.ಎನ್)**
ಉಪಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ
ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ
ಜೀವನೋಪಾಯ ಇಲಾಖೆ)

ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 780 |
| ಮಾನ್ಯ ಸದಸ್ಯರ ಹೆಸರು | ಶ್ರೀ. ಖಾದರ್ ಯು.ಟಿ. (ಮಂಗಳೂರು) |
| ಉತ್ತರಿಸಬೇಕಾದ ದಿನಾಂಕ | 10-12-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಎಷ್ಟು ವೈದ್ಯಾಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಗಳು ಖಾಲಿಯಿದೆ; | ರಾಜ್ಯದ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಒಟ್ಟು 870 ವೈದ್ಯಾಧಿಕಾರಿಗಳ ಹುದ್ದೆಗಳು ಖಾಲಿ ಇದ್ದು, ಅದರಲ್ಲಿ 731 ವೈದ್ಯಾಧಿಕಾರಿಗಳು ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆ. 3468 ಸಿಬ್ಬಂದಿಗಳ ಹುದ್ದೆಗಳು ಖಾಲಿ ಇವೆ |
| ಆ | ಈ ಹುದ್ದೆಗಳನ್ನು ಭರ್ತಿಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ಕರ್ತವ್ಯ ವೈದ್ಯಾಧಿಕಾರಿ/ ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿದ್ದು, ವಿಶೇಷ ನೇಮಕಾತಿ ಸಮಿತಿ ಅಧಿಸೂಚನೆ ಸಂಖ್ಯೆ:ಎಸ್‌ಆರ್‌ಸಿ/68/2019-20 ದಿ:10.09.2020 ರಲ್ಲಿ ಅಧಿಸೂಚನೆ ಹೊರಡಿಸಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ನೇಮಕಾತಿ ಸಂದರ್ಭದಲ್ಲಿ ಖಾಲಿ ಇರುವ ಹುದ್ದೆಗಳನ್ನು ಪ್ರಚುರಪಡಿಸಿ ಭರ್ತಿ ಮಾಡಲು ಕ್ರಮಕೈಗೊಳ್ಳಲಾಗುವುದು. |

**ಆಕುಕ 74 ಹೆಚ್‌ಎಸ್‌ಡಿ 2020**

(ಡಾ. ಕೆ ಸುಧಾಕರ್ )
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

| ಕರ್ನಾಟಕ ವಿಧಾನಸಭೆ | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 896 |
| 2 | ಮಾನ್ಯ ಸದಸ್ಯರ ಹೆಸರು | ಶ್ರೀ ರಾಜೇಗೌಡ ಟಿ.ಡಿ.(ಶೃಂಗೇರಿ) |
| 3 | ಉತ್ತರಿಸಬೇಕಾದ ದಿನಾಂಕ | 10.12.2020 |
| 4 | ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮಲೆನಾಡು ಭಾಗದಲ್ಲಿ ಹೈಟೆಕ್ ಲ್ಯಾಬ್, ಸಿಟಿ ಸ್ಕ್ಯಾನ್ ಲ್ಯಾಬ್, ಹೈಟೆಕ್ ಪೋಸ್ಟ್ ಮಾರ್ಟಮ್ ಕೇಂದ್ರಗಳನ್ನೊಳಗೊಂಡಂತೆ ಸುಸಜ್ಜಿತ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಇಲ್ಲದೇ ರೋಗಿಗಳಿಗೆ ತೊಂದರೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| (ಆ) | ಹಾಗಿದ್ದಲ್ಲಿ ಎಲ್ಲಾ ವ್ಯವಸ್ಥೆಗಳನ್ನೊಳಗೊಂಡ ಸುಸಜ್ಜಿತ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಮಲೆನಾಡು ಭಾಗದಲ್ಲಿ ಯಾವ ತಾಲ್ಲೂಕಿನಲ್ಲಿ ನಿರ್ಮಾಣಗೊಳ್ಳಲಿದೆ; ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಸರ್ಕಾರ ನಿಗದಿಪಡಿಸಿರುವ ಅನುದಾನವೆಷ್ಟು; ಆಸ್ಪತ್ರೆ ನಿರ್ಮಾಣ ಪ್ರಸ್ತಾವನೆ ಯಾವ ಹಂತದಲ್ಲಿದೆ (ಸಂಪೂರ್ಣ ಮಾಹಿತಿ ನೀಡುವುದು); | 1. ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಸುಸಜ್ಜಿತ ಸಿಟಿ ಮತ್ತು ಎಂ.ಆರ್.ಐ ಸ್ಕ್ಯಾನ್ ಸೌಲಭ್ಯ ರೋಗಿಗಳಿಗೆ ಒದಗಿಸಲಾಗುತ್ತಿದೆ. ಸಂಸ್ಥೆಯಲ್ಲಿ ಹೈಟೆಕ್ ಪೋಸ್ಟ್ ಮಾರ್ಟಮ್ ಕೇಂದ್ರವನ್ನು ರೂ.250.00 ಲಕ್ಷಗಳಲ್ಲಿ ಸ್ಥಾಪಿಸಲಾಗುತ್ತಿದೆ.<br>ಸಂಸ್ಥೆಯಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯ ಕಾರ್ಡಿಯಾಲಜಿ ಘಟಕ ಸ್ಥಾಪಿಸಲು ರೂ.3594.54 ಲಕ್ಷಗಳು 2012ನೇ ಸಾಲಿನಿಂದ ಬಿಡುಗಡೆಯಾಗಿದ್ದು, ಬೇಸ್‌ಮೆಂಟ್, ನೆಲಮಹಡಿ ಮತ್ತು ಮೊದಲನೇ ಮಹಡಿ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. ಮುಂದುವರೆದು ಕಾರ್ಡಿಯಾಲಜಿ ಘಟಕದ ಉಪಕರಣಗಳು ಸರಬರಾಜಾಗಿದ್ದು, ಇಂಟೀರಿಯರ್ ಕಾಮಗಾರಿ ಮುಕ್ತಾಯವಾದ ನಂತರ ಪ್ರಾರಂಬಿಸಲಾಗುವುದು.<br>2. ಚಿಕ್ಕಮಗಳೂರು ತಾಲೂಕಿನಲ್ಲಿ ಸರ್ಕಾರದ ವತಿಯಿಂದ 174 ಕೋಟಿ ರೂ.ಗಳ ವೆಚ್ಚದಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯನ್ನು ಪ್ರಾರಂಭಿಸಲು ಸರ್ಕಾರದಿಂದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. |

.....2

| | | |
|---|---|---|
| (ಇ) | ಯಾವ ಕಾಲಮಿತಿಯೊಳಗೆ ಆಸ್ಪತ್ರೆ ನಿರ್ಮಾಣವಾಗಲಿದೆ? | ಅನ್ವಯಿಸುವುದಿಲ್ಲ. |

ಸಂಖ್ಯೆ:ಎಂಇಡಿ 264 ಆರ್‌ಐ 2020

(ಡಾ.ಕೆ.ಸುಧಾಕರ್)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 834 |
| ಸದಸ್ಯರ ಹೆಸರು | ಶ್ರೀ ಹೆಚ್.ಡಿ. ರೇವಣ್ಣ (ಹೊಳೆನರಸೀಪುರ), |
| ಉತ್ತರಿಸಬೇಕಾದ ದಿನಾಂಕ | 10.12.2020 |
| ಉತ್ತರಿಸಬೇಕಾದ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |

| | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆ ಹೊಳೇನರಸೀಪುರ ತಾಲ್ಲೂಕು ಹಳೇಕೋಟೆ ಹೋಬಳಿ ಹರದನಹಳ್ಳಿ ಗ್ರಾಮದಲ್ಲಿ ನೂತನವಾಗಿ 2019-20ನೇ ಶೈಕ್ಷಣಿಕ ಸಾಲಿನಿಂದ ಪ್ರಾರಂಭಗೊಂಡಿರುವ ಮಾದರಿ ವಸತಿಯುಕ್ತ ಸರ್ಕಾರಿ ಪ್ರಥಮದರ್ಜೆ ಕಾಲೇಜಿನಲ್ಲಿ ಪ್ರಸ್ತುತ ಬಿ.ಎ. ವಿಭಾಗದಲ್ಲಿ ಹೆಚ್.ಇ.ಎಸ್., ಹೆಚ್.ಇ.ಜಿ., ಹೆಚ್.ಪಿ.ಎಸ್., ಹೆಚ್.ಪಿ.ಜೆ., ಹೆಚ್.ಕೆ.ಎಸ್., ಹೆಚ್.ಇ.ಪಿ, ಐಚ್ಛಿಕ ವಿಷಯಗಳುಳ್ಳ ಕಾಂಬಿನೇಷನ್‌ಗಳನ್ನು ಬಿ.ಎಸ್ಸಿ. ವಿಭಾಗದಲ್ಲಿ ಪಿ.ಸಿ.ಎಂ, ಪಿ.ಎಂ.ಸಿ.ಎಸ್, ಐಚ್ಛಿಕ ವಿಷಯಗಳುಳ್ಳ ಕಾಂಬಿನೇಷನ್‌ಗಳನ್ನು, ಬಿ.ಕಾಂ., ಬಿ.ಬಿ.ಎ., ಬಿ.ಸಿ.ಎ., ಐಚ್ಛಿಕ ವಿಷಯಗಳುಳ್ಳ ವಿಭಾಗಗಳನ್ನು ಮಂಜೂರು ಮಾಡಿ, ಈ ವಿಷಯಗಳನ್ನು ಬೋಧನೆ ಮಾಡಲು ಅಗತ್ಯವಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ತುರ್ತಾಗಿ ನೇಮಿಸುವಂತೆ ವಿಶ್ವವಿದ್ಯಾನಿಯಲದ ಸ್ಥಳೀಯ ಸಮಿತಿಯು ಷರತ್ತನ್ನು ವಿಧಿಸಿದ್ದು, ಕಳೆದ ವರ್ಷದಲ್ಲಿ ಬಿ.ಎ. ಪದವಿಯ ಹೆಚ್.ಇ.ಎಸ್. ಮತ್ತು ಬಿ.ಕಾಂ ಎರಡು ವಿಭಾಗಗಳು ಮಾತ್ರ ಪ್ರಾರಂಭಗೊಂಡು ತರಗತಿಗಳು ನಡೆಯುತ್ತಿದ್ದು, 2020-21ನೇ ಶೈಕ್ಷಣಿಕ ವರ್ಷದಿಂದ ಮೈಸೂರು ವಿಶ್ವವಿದ್ಯಾನಿಲಯ ಮಂಜೂರು ಮಾಡಿರುವ ಐಚ್ಛಿಕ ವಿಷಯಗಳುಳ್ಳ ಎಲ್ಲಾ ಕಾಂಬಿನೇಷನ್‌ಗಳನ್ನು ಪ್ರಾರಂಭಿಸ ಬೇಕಾಗಿರುವುದರಿಂದ ಅಗತ್ಯವಿರುವ 15 ಬೋಧಕ ಹುದ್ದೆಗಳು, 10 ಬೋಧಕೇತರ ಹುದ್ದೆಗಳು ಮತ್ತು ವಸತಿ ನಿಲಯವನ್ನು ನಡೆಸಲು 10 ಹುದ್ದೆಗಳನ್ನು ಸೃಜಿಸಬೇಕಾಗಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಆದೇಶ ಸಂ: ಇಡಿ 80 ಹೆಚ್.ಪಿ.ಸಿ. 2018, ದಿ.14.09.2018ರಲ್ಲಿ ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕಿನ ಹರದನಹಳ್ಳಿಯಲ್ಲಿ ಮಾದರಿ ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜನ್ನು ಪ್ರಾರಂಭಿಸಲು ಅನುಮೋದನೆಯನ್ನು ನೀಡಿದ್ದು, ಸರ್ಕಾರದ ಆದೇಶದಲ್ಲಿ ಮಾದರಿ ವಸತಿಯುಕ್ತ ಕಾಲೇಜಿನಲ್ಲಿ ಬಿ.ಎಸ್ಸಿ- ಭೌತಶಾಸ್ತ್ರ, ಗಣಿತಶಾಸ್ತ್ರ, ಕಂಪ್ಯೂಟರ್ ಸೈನ್ಸ್ (ಪಿ.ಎಂ.ಸಿ.ಎಸ್), ಬಿ.ಕಾಂ ಮತ್ತು ಬಿ.ಸಿ.ಎ ಕೋರ್ಸ್‌ನ್ನು ಪ್ರಾರಂಭಿಸಲು ಅನುಮೋದನೆ ನೀಡಿರುತ್ತದೆ.<br><br>ಆಯುಕ್ತರ ಆದೇಶ ಸಂಖ್ಯೆ:ಕಾಶಿಇ:42:ಬೋಹುಸೃ:2018-19, ದಿ.26.02.2020 ರಲ್ಲಿ ಮಾದರಿ ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಹರದನಹಳ್ಳಿ, ಹೊಳೆನರಸೀಪುರ ತಾಲ್ಲೂಕು ಇಲ್ಲಿಗೆ ಕೆಳಕಂಡ ವಿಷಯಗಳ ಪ್ರಾಧ್ಯಾಪಕರ ಹುದ್ದೆಗಳನ್ನು ಮಂಜೂರು ಮಾಡಲಾಗಿರುತ್ತದೆ.<br><br>ಕ್ರ.ಸಂ / ವಿಷಯ / ಹುದ್ದೆ<br>1 / ಕನ್ನಡ / 01<br>2 / ಇಂಗ್ಲೀಷ್ / 01<br>3 / ಭೌತಶಾಸ್ತ್ರ / 01<br>4 / ಗಣಿತಶಾಸ್ತ್ರ / 01<br>5 / ಗಣಕವಿಜ್ಞಾನ / 01<br>6 / ವಾಣಿಜ್ಯಶಾಸ್ತ್ರ / 03<br>ಒಟ್ಟು / 08<br><br>ಮುಂದುವರೆದು, ಸದರಿ ಕಾಲೇಜಿಗೆ ಅಗತ್ಯವಿರುವ 15 ಬೋಧಕ ಹುದ್ದೆಗಳು ಹಾಗೂ 10 ಬೋಧಕೇತರ ಹುದ್ದೆಗಳನ್ನು ಹಾಗೂ ಹಾಸ್ಟೆಲ್‌ಗೆ ಅಗತ್ಯವಿರುವ 10 ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. |
| ಆ) | ಹರದನಹಳ್ಳಿ ಗ್ರಾಮದಲ್ಲಿ ನೂತನವಾಗಿ 2019-20 ನೇ ಸಾಲಿನಿಂದ ಪ್ರಾರಂಭಗೊಂಡಿರುವ ಮಾದರಿ ವಸತಿಯುಕ್ತ ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜಿಗೆ ಮೈಸೂರು ವಿಶ್ವವಿದ್ಯಾಲಯ ವಿಧಿಸಿರುವ ಷರತ್ತಿನಂತೆ | ಹರದನಹಳ್ಳಿ ಗ್ರಾಮದಲ್ಲಿ ಪ್ರಾರಂಭಗೊಂಡಿರುವ ಮಾದರಿ ವಸತಿಯುಕ್ತ ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜಿಗೆ 08 ಬೋಧಕ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಸದರಿ ಹುದ್ದೆಗಳ ಭರ್ತಿಗೆ ಸಂಬಂಧಿಸಿದಂತೆ ಕೆಳಕಂಡ ವಿವರಗಳನ್ನು ಗಮನಕ್ಕೆ ತರಲಾಗಿದೆ. |

| | | |
|---|---|---|
| | ಈವರೆಗೂ ಯಾವುದೇ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಹುದ್ದೆಗಳ ಸೃಜನೆಯಾಗದೇ ಇರುವುದರಿಂದ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬೋಧಕಹುದ್ದೆಗಳು:<br><br>ಪ್ರಾಂಶುಪಾಲರು;<br>ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿ ಇರುವ ಪ್ರಾಂಶುಪಾಲರ ಹುದ್ದೆಗಳನ್ನು ಯು.ಜಿ.ಸಿ ಮಾನದಂಡಗಳನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಆದೇಶಿಸಲಾಗಿದೆ. ಒಟ್ಟು-310 ಪ್ರಾಂಶುಪಾಲರ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ/121/ಡಿಸಿಇ/2018, ದಿನಾಂಕ:09.09.2020 ರಲ್ಲಿ ಅಂತಿಮ ನಿಯಮಗಳನ್ನು ಹೊರಡಿಸಲಾಗಿದೆ.<br><br>ಸಹಾಯಕ ಪ್ರಾಧ್ಯಾಪಕರು;<br>ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಖಾಲಿ ಇರುವ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಲ್ಲಿ 1242 ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ/257/ಡಿಸಿಇ/2019(ಭಾ-3) ದಿನಾಂಕ:08.07.2020 ರಲ್ಲಿ ಅಂತಿಮ ವಿಶೇಷ ನೇಮಕಾತಿ ನಿಯಮಗಳನ್ನು ಹೊರಡಿಸಲಾಗಿದೆ.<br>ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ: ಆಇ/03/ಬಿಇಎಂ/2020, ದಿ:06.07.2020 ತಿಳಿಸಿರುವಂತೆ 2020-21 ನೇ ಸಾಲಿನಲ್ಲಿ ಯಾವುದೇ ನೇರ ನೇಮಕಾತಿಯನ್ನು ಕೈಗೊಳ್ಳುವಂತಿಲ್ಲ ನಿರ್ಬಂದಿಸಿದೆ.<br>ಆದಾಗ್ಯೂ, ವಿದ್ಯಾರ್ಥಿಗಳ ವ್ಯಾಸಂಗದ ಹಿತದೃಷ್ಟಿಯಿಂದ ಖಾಲಿ ಇರುವ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳ ಎದುರಾಗಿ ಲಭ್ಯವಾಗುವ ಬೋಧನಾ ಕಾರ್ಯಭಾರವನ್ನು ನಿರ್ವಹಿಸಲು ಅರ್ಹ ಅತಿಥಿ ಉಪನ್ಯಾಸಕರ ಸೇವೆಯನ್ನು ಬಳಸಿಕೊಂಡು, ಆ ಮೂಲಕ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ತೊಂದರೆಯಾಗದಂತೆ, ಪಾಠ-ಪ್ರವಚನಗಳನ್ನು ನಡೆಸಲಾಗುತ್ತಿದೆ.<br><br>ದೈಹಿಕ ಶಿಕ್ಷಣ ಬೋಧಕರು ಮತ್ತು ಗ್ರಂಥಪಾಲಕರು;-<br><br>ಆರ್ಥಿಕ ಇಲಾಖೆಯು ದೈಹಿಕ ಶಿಕ್ಷಣ ಬೋಧಕರ ಹಾಗೂ ಗ್ರಂಥಪಾಲಕರ ಹುದ್ದೆಗಳ ಭರ್ತಿಗೆ ಸಂಬಂಧಿಸಿದಂತೆ ವಿವರವಾದ ಪ್ರಸ್ತಾವನೆಯನ್ನು ಒಂದು ವರ್ಷದ ನಂತರ ಸಲ್ಲಿಸುವಂತೆ ತಿಳಿಸಿರುತ್ತದೆ.<br><br>ಬೋಧಕೇತರ ಹುದ್ದೆಗಳು:<br>ಇಲಾಖೆಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕರು & ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಪೈಕಿ 123 ಪ್ರ.ದ.ಸಹಾಯಕರು, 88 ದ್ವಿ.ದ.ಸಹಾಯಕರ ಹುದ್ದೆಗಳನ್ನು ಭರ್ತಿಮಾಡುವ ಸಂಬಂಧ ಸರ್ಕಾರದ ಪತ್ರ ಸಂಖ್ಯೆ:ಇಡಿ/116/ ಯುಇಸಿ/2016, ದಿ:21.05.2019ರಲ್ಲಿ ಅನುಮತಿ ನೀಡಲಾಗಿದ್ದು, ಅದರಂತೆ ಸದರಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಕರ್ನಾಟಕ ಲೋಕ ಸೇವಾ ಆಯೋಗವು ನೇಮಕಾತಿಗೆ ಅಧಿಸೂಚನೆಯನ್ನು ಹೊರಡಿಸಿದ್ದು, ಅರ್ಹ ಅಭ್ಯರ್ಥಿಗಳ |
| ಇ) | ಹಾಗಿದ್ದಲ್ಲಿ, ಹರದನಹಳ್ಳಿ ಗ್ರಾಮದಲ್ಲಿ ನೂತನವಾಗಿ 2019-20 ನೇ ಶೈಕ್ಷಣಿಕ ಸಾಲಿನಿಂದ ಮಾದರಿ ವಸತಿಯುಕ್ತ ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜಿಗೆ ಮೈಸೂರು ವಿಶ್ವವಿದ್ಯಾನಿಲಯ ಅನುಮೋದನೆ ಮಾಡಿರುವ ಐಚ್ಛಿಕ ವಿಷಯಗಳುಳ್ಳ ಕಾಂಬಿನೇಷನ್‌ಗಳ ಕೋರ್ಸ್‌ಗಳನ್ನು 2020-21ನೇ ಶೈಕ್ಷಣಿಕ ವರ್ಷದಲ್ಲಿ ಪ್ರಾರಂಭಿಸಲು ಈಗಾಗಲೇ ಅಗತ್ಯವಿರುವ ವ್ಯವಸ್ಥೆಯನ್ನು ಮಾಡಿಕೊಂಡಿದ್ದು ಅದರಂತೆ ಅಗತ್ಯವಿರುವ 15 ಬೋಧಕ ಸಿಬ್ಬಂದಿಗಳು, 10 ಬೋಧಕೇತರ ಹುದ್ದೆಗಳು ಮತ್ತು ವಸತಿ ನಿಲಯ ನಡೆಸಲು ಅಗತ್ಯವಿರುವ 10 ಹುದ್ದೆಗಳನ್ನು ಸರ್ಕಾರ ಇದುವರೆಗೂ ಮಂಜೂರು ಮಾಡದೇ ಇರಲು ಕಾರಣವೇನು: ಯಾವ ಕಾಲಮಿತಿಯೊಳಗೆ ಈ ಬೋಧಕ/ ಬೋಧಕೇತರ ಹುದ್ದೆಗಳನ್ನು ಸೃಜನೆ ಮಾಡಿ ಈ ಹುದ್ದೆಗಳನ್ನು ಭರ್ತಿ ಮಾಡಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | |

| | | |
|---|---|---|
| | | ಪಟ್ಟಿಯನ್ನು ನೀಡಿದ ನಂತರ ಸದರಿ ಖಾಲಿ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಲು ಕ್ರಮವಹಿಸಲಾಗುವುದು.<br><br>ಪ್ರಸ್ತುತ ಗ್ರೂಪ್-ಡಿ ಮತ್ತು ಪರಿಚಾರಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲು ಅವಕಾಶವಿಲ್ಲದಿರುವುದರಿಂದ ಅಟೆಂಡರ್ ಮತ್ತು ಪರಿಚಾರಕರ ಖಾಲಿ ಹುದ್ದೆಗಳಿಗೆದುರಾಗಿ ತಾತ್ಕಾಲಿಕವಾಗಿ 1524 ಹುದ್ದೆಗಳ ಸೇವೆಯನ್ನು ನಿಯಮಾನುಸಾರ ಹೊರಗುತ್ತಿಗೆ ಆಧಾರದ ಮೇಲೆ ಪಡೆಯಲು ಕಡತ ಸಂಖ್ಯೆ:ಇಡಿ 132 ಯುಇಸಿ 2018ರಲ್ಲ ಆರ್ಥಿಕ ಇಲಾಖೆಯು 2020-21ನೇ ಸಾಲಿನಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು ಪ್ರಾರಂಭಗೊಂಡ ನಂತರ ಪ್ರಸ್ತಾವನೆಯನ್ನು ಸಲ್ಲಿಸುವಂತೆ ತಿಳಿಸಿದ್ದರಿಂದ, ಅದರಂತೆ, ಕ್ರಮವಹಿಸಲಾಗುತ್ತಿದೆ. |

**ಇಡಿ 226 ಡಿಸಿಇ 2020**

(ಡಾ. ಅಶ್ವಥ್ ನಾರಾಯಣ ಸಿ.ಎನ್.)
**ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)**

ಅನುಬಂಧ-2

**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ : ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳು ಸಂಯೋಜನೆ, ಹೊಸ ಕೋರ್ಸ್ ಪ್ರಾರಂಭ, ಸಂಯೋಜನೆ ಮುಂದುವರಿಕೆ, ಖಾಯಂ ಸಂಯೋಜನೆ ಇತ್ಯಾದಿಗಳ ಬಗ್ಗೆ, ಆನ್ ಲೈನ್ ಮುಖಾಂತರ ಕ್ರಮಕೈಗೊಳ್ಳುವ ಬಗ್ಗೆ.

ಓದಲಾಗಿದೆ : ಸರ್ಕಾರಿ ಆದೇಶ ಸಂಖ್ಯೆ. ED 39 egov 2015 ದಿನಾಂಕ:18/11/2015

*********

**ಪ್ರಸ್ತಾವನೆ:**

ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳು ಸಂಯೋಜನೆಗಳನ್ನು ವಿವಿಧ ಕಾಲೇಜುಗಳಿಗೆ ನೀಡುವ ಕುರಿತು ತಪಾಸಣಾ ಸಮಿತಿಗಳನ್ನು ರಚಿಸಿ, ಕಾಲೇಜುಗಳಲ್ಲಿನ ಮೂಲಭೂತ ಸೌಕರ್ಯ, ಸಿಬ್ಬಂದಿಗಳ ಸೇವಾ ವಿವರಗಳನ್ನು, ವಿದ್ಯಾರ್ಥಿಗಳ ದಾಖಲಾತಿ ಇನ್ನಿತರೆ ವಿಷಯಗಳ ಬಗ್ಗೆ ಪರಿಶೀಲಿಸಿ ನೀಡುವ ವರದಿಯನ್ನು ವಿಶ್ವವಿದ್ಯಾಲಯಗಳ ಶೈಕ್ಷಣಿಕ ಪರಿಷತ್ ಹಾಗೂ ಸಿಂಡಿಕೇಟ್‌ಗಳಲ್ಲಿ ಚರ್ಚಿಸಿ ತೀರ್ಮಾನ ಕೈಗೊಂಡ ನಂತರ ಸರ್ಕಾರದ ಅನುಮೋದನೆಗಾಗಿ ಕಳುಹಿಸಲಾಗುತ್ತಿತ್ತು.

ಆದರೆ ಸರ್ಕಾರದ ಹಂತದಲ್ಲಿ ಇಂತಹ ಪ್ರಸ್ತಾವನೆಗಳನ್ನು ಪರಿಶೀಲಿಸುವಾಗ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಸಂಯೋಜನೆ ಕುರಿತ ಏಕತೆ ಇಲ್ಲದೆ ಇರುವುದು ಗಮನಿಸಿ ಪ್ರಸ್ತಾವನೆಗಳನ್ನು ಪರಿಗಣಿಸುವುದು ಕಷ್ಟಸಾಧ್ಯವಾಗಿರುವ ಹಿನ್ನೆಲೆಯಲ್ಲಿ ವಿಶ್ವವಿದ್ಯಾಲಯಗಳ ಸಂಯೋಜನ ಪ್ರಕ್ರಿಯೆಗಳಾದ; 1. Opening New Colleges, 2. Extension of existing Affiliation 3. Continuation of Affiliation 4. Permanent Affiliation 5.Change/ Addition of subject, Division of Faculty, Increase of intake 6.Change of name 7. Closure & withdrawal of a College 8. Local Inquiry Committee and 9. Transfer of Management ಮುಂತಾದವುಗಳ ಬಗ್ಗೆ ರಾಜ್ಯಾದ್ಯಂತ ಏಕರೂಪದ ಸಂಯೋಜನಾ ಪ್ರಕ್ರಿಯಗಳನ್ನು ಪಾರದರ್ಶಕವಾಗಿ ಕೈಗೊಳ್ಳಲು ಉದ್ದೇಶಿಸಿ ಮೇಲೆ ಓದಲಾದ ದಿನಾಂಕ:18.11.2015 ರ ಆದೇಶದಲ್ಲಿ 2015-16 ನೇ ಸಾಲಿನಿಂದ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಡುವ ಕಾಲೇಜುಗಳ ಎಲ್ಲಾ ರೀತಿಯ ಸಂಯೋಜನೆಗಳನ್ನು ರಾಷ್ಟ್ರೀಯ ಮಾಹಿತಿ ಸಂಸ್ಥೆ (ಎನ್.ಐ.ಸಿ) ಸಿದ್ದಪಡಿಸಿರುವ ಆನ್ ಲೈನ್ ತಂತ್ರಾಂಶದ ಮುಖಾಂತರವೇ ನಡೆಸಲು ಆದೇಶಿಸಲಾಗಿರುತ್ತದೆ.

ತದನಂತರ, ಕಳೆದ ಹಲವು ವರ್ಷಗಳಲ್ಲಿ ತಂತ್ರಾಂಶದ ಉನ್ನತೀಕರಣದ ಕಾರಣದಿಂದ ಪ್ರಕ್ರಿಯೆಗೆ ಹಿನ್ನಡೆಯಾಗಿದ್ದು, 2019-20 ನೇ ಸಾಲಿನಲ್ಲಿ ಸದರಿ ತಂತ್ರಾಂಶವನ್ನು ರಾಷ್ಟ್ರೀಯ ಮಾಹಿತಿ ಸಂಸ್ಥೆ (ಎನ್.ಐ.ಸಿ) ಮುಖಾಂತರ ಉನ್ನತೀಕರಿಸಿ ಇನ್ನು ಮುಂದೆ 2019-20 ನೇ ಸಾಲಿನಿಂದಲೇ ಪ್ರಕ್ರಿಯೆ ಕೈಗೊಂಡು 2020-21 ನೆ ಸಾಲಿಗೆ ಈ ಸಂಯೋಜನಾ ಪ್ರಕ್ರಿಯೆಯನ್ನು ತಂತ್ರಾಂಶದ ಮುಖಾಂತರವೇ ಅನುಷ್ಠಾನಗೊಳಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 34 ಇಜಿಒವಿ2020(ಭಾಗ-2), ಬೆಂಗಳೂರು, ದಿನಾಂಕ: 22.06.2020**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ ಬರುವ ಸಂಯೋಜಿತ ಕಾಲೇಜುಗಳಿಗೆ 2019-20 ನೇ ಸಾಲಿನಲ್ಲಿ ಸಂಯೋಜನಾ ಪ್ರಕ್ರಿಯೆ ಕೈಗೊಂಡು 2020-21 ನೆ ಸಾಲಿನ Opening New Colleges, Extension of existing Affiliation, Continuation of Affiliation,

Permanent Affiliation, Change/ Addition of subject, Division of Faculty, Increase of intake, Change of name, Closure & withdrawal of a College, Local Inquiry Committee formation and Transfer of Management ಮುಂತಾದ ಕಾರ್ಯ ಚಟುವಟಿಕೆಗಳಿಗೆ ಅನುಮೋದನೆ ನೀಡುವಾಗ ಕಡ್ಡಾಯವಾಗಿ ರಾಷ್ಟ್ರೀಯ ಮಾಹಿತಿ ಸಂಸ್ಥೆ (ಎನ್.ಐ.ಸಿ) ಮುಖಾಂತರ ಉನ್ನತೀಕರಿಸಿರುವ ಆನ್ ಲೈನ್ ತಂತ್ರಾಂಶದ ಮುಖಾಂತರವೇ ಅರ್ಜಿಗಳನ್ನು ಆಹ್ವಾನಿಸಲು ಹಾಗೂ ಭರ್ತಿ ಮಾಡಿರುವ ಅರ್ಜಿಗಳಲ್ಲಿ ಅಳವಡಿಸಿರುವ ಮಾಹಿತಿಗಳನ್ನು ವಿಶ್ವವಿದ್ಯಾಲಯವು ನೇಮಿಸುವ ಸ್ಥಳೀಯ ವಿಚಾರಣಾ ಸಮಿತಿಯು ಪರಾಮರ್ಶಿಸಿ, ಶಿಫಾರಸ್ಸನ್ನು ಆನ್ ಲೈನ್ ಮುಖಾಂತರವೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸೂಕ್ತ ಕ್ರಮ ಕೈಗೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

(ಕೆ.ಎಲ್. ಸುಬ್ರಮಣ್ಯ)
ಉಪ ಕಾರ್ಯದರ್ಶಿಗಳು (ವಿಶ್ವವಿದ್ಯಾಲಯ)
ಉನ್ನತ ಶಿಕ್ಷಣ ಇಲಾಖೆ

<u>ಪ್ರತಿಯನ್ನು:</u>

1. ಕುಲಪತಿಗಳು, ಉನ್ನತ ಶಿಕ್ಷಣ ಇಲಾಖೆ ವ್ಯಾಪ್ತಿಯ ಸಾರ್ವಜನಿಕ ವಿಶ್ವವಿದ್ಯಾಲಯಗಳು, ಕರ್ನಾಟಕ.
2. ಕುಲಸಚಿವರುಗಳು, ಉನ್ನತ ಶಿಕ್ಷಣ ಇಲಾಖೆ ವ್ಯಾಪ್ತಿಯ ಸಾರ್ವಜನಿಕ ವಿಶ್ವವಿದ್ಯಾಲಯಗಳು, ಕರ್ನಾಟಕ.
3. ಹಣಕಾಸು ಅಧಿಕಾರಿ, ಉನ್ನತ ಶಿಕ್ಷಣ ಇಲಾಖೆ ವ್ಯಾಪ್ತಿಯ ಸಾರ್ವಜನಿಕ ವಿಶ್ವವಿದ್ಯಾಲಯಗಳು, ಕರ್ನಾಟಕ.
4. ಆಯುಕ್ತರು, ಕಾಲೇಜು ಶಿಕ್ಷಣ ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು-560 001.
5. ಕಾರ್ಯ ನಿರ್ವಾಹಕ ನಿರ್ದೇಶಕರು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್, ಬೆಂಗಳೂರು.
6. ಗೌರವಾನ್ವಿತ ರಾಜ್ಯಪಾಲರ ಆಪ್ತ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ.
7. ಕಾರ್ಯದರ್ಶಿಗಳು, ಮಾನ್ಯ ಉಪಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ.
8. ಉಪ ಮುಖ್ಯಮಂತ್ರಿಗಳು, ಉನ್ನತ ಶಿಕ್ಷಣ ಇಲಾಖೆರವರ ಆಪ್ತ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ.
9. ಅಪರ ಮುಖ್ಯ ಕಾರ್ಯದರ್ಶಿರವರ ಆಪ್ತ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ.
10. ಉಪ ಕಾರ್ಯದರ್ಶಿಗಳು (ವಿಶ್ವವಿದ್ಯಾಲಯ), ಉನ್ನತ ಶಿಕ್ಷಣ ಇಲಾಖೆ, ಬೆಂಗಳೂರು.
11. ಉಪ ಕಾರ್ಯದರ್ಶಿಗಳು (ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ), ಉನ್ನತ ಶಿಕ್ಷಣ ಇಲಾಖೆ, ಬೆಂಗಳೂರು.
12. ಉಪ ಕಾರ್ಯದರ್ಶಿಗಳು (ಯೋಜನೆ), ಉನ್ನತ ಶಿಕ್ಷಣ ಇಲಾಖೆ, ಬೆಂಗಳೂರು.
13. ವಿಶೇಷಾಧಿಕಾರಿಗಳು, ಇ-ಆಡಳಿತ ಘಟಕ, ಉನ್ನತ ಶಿಕ್ಷಣ ಇಲಾಖೆ, ಬೆಂಗಳೂರು.
14. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿ.



**ಕರ್ನಾಟಕ ಸರ್ಕಾರ**

**ಕಾಲೇಜು ಶಿಕ್ಷಣ ಇಲಾಖೆ**

ಸಂಖ್ಯೆ:ಕಾಶಿಇ/ಶೈವಿ/09/ಹೊ.ಕೋಕಾಂ/2018-19/ಭಾ-2

ಕಾಲೇಜು ಶಿಕ್ಷಣ ಆಯುಕ್ತರ ಕಛೇರಿ
ಉನ್ನತ ಶಿಕ್ಷಣ ಸೌಧ,ಶೇಷಾದ್ರಿ ರಸ್ತೆ,
ಬೆಂಗಳೂರು,ದಿನಾಂಕ:31-08-2020.

ಇವರಿಗೆ.

ಪ್ರಾಂಶುಪಾಲರು,
ಮಹಿಳಾ ಸರ್ಕಾರಿ ಗೃಹ ವಿಜ್ಞಾನ ಕಾಲೇಜು,
ಹೊಳೆನರಸೀಪುರ.-573211.
ಹಾಸನ ಜಿಲ್ಲೆ.

ಮಾನ್ಯರೆ.

**ವಿಷಯ:** 2020-21ನೇ ಸಾಲಿಗೆ ಹೊಸ ಕೋರ್ಸುಗಳಾದ ಸ್ನಾತಕೋತ್ತರ ಎಂ.ಎಸ್ಸಿ (ಫುಡ್ ಅಂಡ್ ನ್ಯೂಟ್ರಿಷನ್) ಎಂ.ಎಸ್ಸಿ (ಮನಃಶಾಸ್ತ್ರ) ಪ್ರಾರಂಭಿಸುವ ಬಗ್ಗೆ ಹಾಗೂ ಎಂ.ಕಾಂ ವಿಭಾಗದಲ್ಲಿ ಹೆಚ್ಚುವರಿ ವಿದ್ಯಾರ್ಥಿ ಪ್ರವೇಶಾತಿಗೆ ಅನುಮತಿ ಕೋರಿರುವ ಬಗ್ಗೆ

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ:ಇಡಿ/34/ಇಜಿಒವಿ/2020(ಭಾಗ-2),ದಿನಾಂಕ:22-6-2020.
2. ಮಾನ್ಯ ಮಾಜಿ ಪ್ರಧಾನಮಂತ್ರಿಗಳು ಭಾರತ ಸರ್ಕಾರ ಇವರ ಪತ್ರದ ದಿನಾಂಕ:14-8-2020.
3. ಶಾಸಕರು ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ಇವರ ಪತ್ರದ ದಿನಾಂಕ:28-8-2020.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ-(2 ಮತ್ತು 3)ರ ಪತ್ರಗಳಲ್ಲಿ ಸರ್ಕಾರಿ ಗೃಹ ವಿಜ್ಞಾನ ಕಾಲೇಜು, ಹೊಳೆನರಸೀಪುರ ಇಲ್ಲಿ ಗೆ ಹೊಸ ಕೋರ್ಸುಗಳಾದ ಎಂ.ಎಸ್ಸಿ (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್) ಎಂ.ಎಸ್ಸಿ (ಮನಃಶಾಸ್ತ್ರ) ಪ್ರಾರಂಭಿಸುವ ಬಗ್ಗೆ ಹಾಗೂ ಎಂ.ಕಾಂ ಸ್ನಾತಕೋತ್ತರ ವಿಭಾಗದಲ್ಲಿ ಹಾಲಿ ಇರುವ 30 ವಿದ್ಯಾರ್ಥಿಗಳ ಪ್ರವೇಶಾತಿ ನಿಗಧಿಯನ್ನು ಹೆಚ್ಚುವರಿಯಾಗಿ -60 ವಿದ್ಯಾರ್ಥಿಗಳ ಪ್ರವೇಶಾತಿ ಪ್ರಮಾಣವನ್ನು ಹೆಚ್ಚಿಸಲು ಮಂಜೂರು ನೀಡುವಂತೆ ಕೋರಿರುತ್ತಾರೆ.

ಈ ಸಂಬಂಧ, ಉಲ್ಲೇಖ-(1)ರ ಸರ್ಕಾರದ ಆದೇಶದಲ್ಲಿ ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ ಬರುವ ಸಂಯೋಜಿತ ಕಾಲೇಜುಗಳಿಗೆ 2019-20ನೇ ಸಾಲಿನಲ್ಲಿ ಸಂಯೋಜನಾ ಪ್ರಕ್ರಿಯೆ ಕೈಗೊಂಡು 2020-21ನೇ ಸಾಲಿನ Opening New Colleges, Extension of existing Affiliation, Continuation of Affiliation,Permanent Affiliation, Change/Addition of Subject, Division of Faculty, Increase of intake, change of name, Closure & withdrawal of a College, Local Inquiry committee formation and Transfer of Management ಮುಂತಾದ ಕಾರ್ಯ ಚಟುವಟಿಕೆಗಳಿಗೆ ಅನುಮೋದನೆಯನ್ನು ಆನ್ ಲೈನ್ ತಂತ್ರಾಂಶದ ಮುಖಾಂತರವೇ ಅರ್ಜಿಗಳನ್ನು ಆಹ್ವಾನಿಸಲು ಹಾಗೂ ಭರ್ತಿ ಮಾಡಿರುವ ಅರ್ಜಿಗಳಲ್ಲಿ ಅಳವಡಿಸಿರುವ ಮಾಹಿತಿಗಳನ್ನು ವಿಶ್ವವಿದ್ಯಾಲಯವು ನೇಮಿಸುವ ಸ್ಥಳೀಯ ವಿಚಾರಣಾ ಸಮಿತಿಯು ಪರಾಮರ್ಶಿಸಿ, ಶಿಫಾರಸ್ಸನ್ನು ಆನ್ ಲೈನ್ ಮುಖಾಂತರವೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಕ್ರಮವಹಿಸುವಂತೆ ಆದೇಶಿಸಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ತಮ್ಮ ಕಾಲೇಜಿನಲ್ಲಿ ಹೊಸದಾಗಿ ಪ್ರಾರಂಭಿಸಲು ಕೋರಿರುವ ಎಂ.ಎಸ್ಸಿ (ಫುಡ್ ಸೈನ್ಸ್ ಅಂಡ್ ನ್ಯೂಟ್ರಿಷನ್ಸ್) ಎಂ.ಎಸ್ಸಿ (ಮನಃಶಾಸ್ತ್ರ) ಹಾಗೂ ಎಂ.ಕಾಂ ಸ್ನಾತಕೋತ್ತರ ವಿಭಾಗದಲ್ಲಿ ಹಾಲಿ ಇರುವ 30 ವಿದ್ಯಾರ್ಥಿಗಳ ಪ್ರವೇಶಾತಿ ನಿಗಧಿಯನ್ನು ಹೆಚ್ಚುವರಿಯಾಗಿ -60ಕ್ಕೆ ಹೆಚ್ಚಿಸುವ ಸಂಬಂಧ ಆನ್ ಲೈನ್ ತಂತ್ರಾಂಶದ ಮುಖಾಂತರ ಸಂಬಂಧಿಸಿದ ವಿಶ್ವವಿದ್ಯಾಲಯಕ್ಕೆ ಅರ್ಜಿ ಸಲ್ಲಿಸುವಂತೆ ಸೂಚಿಸಲಾಗಿದೆ.

ತಮ್ಮ ವಿಶ್ವಾಸಿ

ಜಂಟಿ ನಿರ್ದೇಶಕರು (ಶೈಕ್ಷಣಿಕ)
ಕಾಲೇಜು ಶಿಕ್ಷಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 739 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ) |
| ಉತ್ತರಿಸುವ ದಿನಾಂಕ: | : | **10.12.2020** |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ದಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ) |

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಎ.ಐ.ಸಿ.ಟಿ.ಇ ನಿಯಮಾನುಸಾರ ಬೋಧಕ/ ಬೋಧಕೇತರ ಹುದ್ದೆಗಳನ್ನು ಸೃಜಿಸಲಾಗಿದ್ದು, ಈ ಹುದ್ದೆಗಳು ಹಲವಾರು ವರ್ಷಗಳಿಂದ ಖಾಲಿಯಿರುವುದರಿಂದ ವಿದ್ಯಾರ್ಥಿಗಳಿಗೆ ತಾಂತ್ರಿಕ ವ್ಯಾಸಂಗಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ತಾಂತ್ರಿಕ ಶಿಕ್ಷಣ ಇಲಾಖೆಯ ಅಧೀನದಲ್ಲಿ ಪ್ರಸ್ತುತ 14 ಸರ್ಕಾರಿ ಇಂಜಿನಿಯರಿಂಗ್ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದು, ಸದರಿ ಸಂಸ್ಥೆಗಳಿಗೆ ಮಂಜೂರಾದ ಭರ್ತಿಯಾದ ಖಾಲಿಯಿರುವ ಹುದ್ದೆಗಳ ವಿವರಗಳು ಈ ಕೆಳಕಂಡಂತಿವೆ. (ಕೆಳಗಿನ ಕೋಷ್ಟಕಗಳು ನೋಡಿ) |
| ಆ) | ರಾಜ್ಯದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಎ.ಐ.ಸಿ.ಟಿ.ಇ ನಿಯಮಾನುಸಾರ ಹಲವಾರು ಬೋಧಕ/ | ಖಾಲಿ ಇರುವ ಬೋಧಕ ಹುದ್ದೆಗೆದುರಾಗಿ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಪ್ರಸ್ತುತ 268 ಅರೆಕಾಲಿಕ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಂಡು ಪಾಠ ಪ್ರವಚನ ನಡೆಸಲಾಗುತ್ತಿದೆ ಮತ್ತು ಸಂಸ್ಥೆಗಳ ಆಡಳಿತಾತ್ಮಕ ಹಿತದೃಷ್ಟಿಯಿಂದ ಖಾಲಿ ಇರುವ ಗ್ರೂಪ್–ಡಿ ಹುದ್ದೆಗಳ ಎದುರಾಗಿ 210 ಅರೆಕಾಲಿಕ ಅಕುಶಲದಾಳುಗಳನ್ನು ನೇಮಿಸಿಕೊಂಡು ಕೆಲಸ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ. |

**ಇಂಜಿನಿಯರಿಂಗ್ ಕಾಲೇಜುಗಳು (ಬೋಧಕ)**

| ಕ್ರಸಂ | ಹುದ್ದೆಯ ವರ್ಗ | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾದ ಹುದ್ದೆಗಳ ಸಂಖ್ಯೆ | ಖಾಲಿಯಾದ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಎ | 229 | 112 | 117 |
| 2 | ಬಿ | 417 | 235 | 182 |
| **ಒಟ್ಟು** | | **646** | **347** | **299** |

**ಇಂಜಿನಿಯರಿಂಗ್ ಕಾಲೇಜುಗಳು (ಬೋಧಕೇತರ)**

| ಕ್ರಸಂ | ಹುದ್ದೆಯ ವರ್ಗ | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾದ ಹುದ್ದೆಗಳ ಸಂಖ್ಯೆ | ಖಾಲಿಯಾದ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಎ | 10 | 1 | 9 |
| 2 | ಬಿ | 21 | 16 | 5 |
| 3 | ಸಿ | 680 | 113 | 567 |
| 4 | ಡಿ | 439 | 12 | 427 |
| **ಒಟ್ಟು** | | **1150** | **142** | **1008** |

ಬೋಧಕೇತರ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಬೇಕಾಗಿದ್ದು, ಈ ಹುದ್ದೆಗಳು ಸೃಜನೆಯಾಗದೆ ಮತ್ತು ಭರ್ತಿಯಾಗದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ

ಸರ್ಕಾರಿ ಇಂಜಿನಿಯರಿಂಗ್ ಸಂಸ್ಥೆಗಳಲ್ಲಿ ಖಾಲಿ ಇರುವ ಬೋಧಕೇತರ ಸಿಬ್ಬಂದಿಗಳನ್ನು ಭರ್ತಿಮಾಡಲು ಈ ಕೆಳಕಂಡಂತೆ ಕ್ರಮ ವಹಿಸಲಾಗಿರುತ್ತದೆ.

| **ಹುದ್ದೆಗಳ ಪದನಾಮ** | **ಕರ್ನಾಟಕ ಲೋಕಸೇವಾ ಆಯೋಗದ ಮತ್ತು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ಭರ್ತಿಮಾಡಲು ಕ್ರಮವಹಿಸಿರುವ ಹುದ್ದೆಗಳ ಸಂಖ್ಯಾ ವಿವರದ ಮಾಹಿತಿ.** | **ಪ್ರಸ್ತುತ ಹಂತ** |
|---|---|---|
| ಬೆರಳಚ್ಚುಗಾರರು | 16 ಹುದ್ದೆಗಳನ್ನು ಭರ್ತಿ ಮಾಡಲು ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ: 17.02.2016ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. | ಕೆ.ಪಿ.ಎಸ್.ಸಿ ಯಿಂದ 15 ಅರ್ಹ ಅಭ್ಯರ್ಥಿಗಳ ಆಯ್ಕೆಪಟ್ಟಿ ಬಂದಿದ್ದು, ನೇಮಕಾತಿ ಆದೇಶ ನೀಡುವ ಬಗ್ಗೆ ಪರಿಶೀಲನೆಯಲ್ಲಿದೆ. |
| ಶಿಕ್ಷಕರು | 37 ಹುದ್ದೆಗಳನ್ನು ಭರ್ತಿ ಮಾಡಲು ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ: 17.02.2016ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. | ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಆರ್(2)763/2020-21/ಪಿಎಸ್ ಸಿ, ದಿ:15.06.2020 ರಲ್ಲಿ ಸ್ಪಷ್ಟ ಮಾಹಿತಿ/ ದಾಖಲೆಗಳೊಂದಿಗೆ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರನ್ನು ಕೋರಿದ್ದು, ಅದರಂತೆ ಮಾಹಿತಿ ಒದಗಿಸಲು ಕ್ರಮ ವಹಿಸುತ್ತಿದ್ದಾರೆ. |
| ಮೆಕ್ಯಾನಿಕ್ | 70 ಹುದ್ದೆಗಳನ್ನು ಭರ್ತಿ ಮಾಡಲು ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ: 29.02.2016 & 10.06.2016ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. | |
| ಕಾರ್ಯಗಾರ ಸಹಾಯಕರು | ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ: 21.11.2016ರಲ್ಲಿ 231 ಹುದ್ದೆಗಳನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಭರ್ತಿ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಖಾಲಿಯಿರುವ ಕಾರ್ಯಗಾರ ಸಹಾಯಕರ ಹುದ್ದೆಗಳಿಗೆದುರಾಗಿ 210 ಅರೆಕಾಲಿಕ ಅಕುಶಲದಾಳುಗಳ ಸೇವೆಯನ್ನು ಹೊರಗುತ್ತಿಗೆ ಮೂಲಕ ಪಡೆಯಲಾಗುತ್ತಿರುತ್ತದೆ. | |
| **ಒಟ್ಟು** | **354** | |

| ಹುದ್ದೆಗಳ ಪದನಾಮ | | ಆರ್ಥಿಕ ಮಿತವ್ಯಯ ಜಾರಿಯಲ್ಲಿರುವ ಪ್ರಯುಕ್ತ ಆರ್ಥಿಕ ಸಹಮತಿಗಾಗಿ ಸಲ್ಲಿಸಲಾದ ಹುದ್ದೆಗಳ ಸಂಖ್ಯಾ ವಿವರದ ಮಾಹಿತಿ. |
|---|---|---|
| ಪ್ರ.ದ.ಸ | 165 | ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ:03.06.2019ರಲ್ಲಿ 165 ಪ್ರಥಮ ದರ್ಜೆ ಸಹಾಯಕರ ಮತ್ತು 65 ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಆರ್ಥಿಕ ಇಲಾಖೆಯು ನೀಡಿರುವ ಅಭಿಪ್ರಾಯದನ್ವಯ ದಿನಾಂಕ:20.05.2020ರ ಸರ್ಕಾರದ ಪತ್ರದಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಗೆ ಮಂಜೂರಾಗಿರುವ ಪ್ರಥಮ ದರ್ಜೆ ಸಹಾಯಕ ಮತ್ತು ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳನ್ನು ಸಮಗ್ರವಾಗಿ ಪರಾಮರ್ಶಿ ಕಾರ್ಯದೊತ್ತಡ ಅಧಿಕವಾಗಿರುವ ಕಛೇರಿಗಳಿಗೆ ಹುದ್ದೆಗಳನ್ನು ಹಂಚಿಕೆ ಮಾಡಿ, ಹೆಚ್ಚುವರಿ ಹುದ್ದೆಗಳನ್ನು ರದ್ದು ಮಾಡುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ರವರಿಗೆ ತಿಳಿಸಲಾಗಿದೆ. |
| ದ್ವಿ.ದ.ಸ | 65 | |
| ಶಿಕ್ಷಕರು | 94 | ತಾಂತ್ರಿಕ ಶಿಕ್ಷಣ ಇಲಾಖೆಯ ಪತ್ರ ದಿನಾಂಕ:11.01.2017ರಲ್ಲಿ ಒಟ್ಟು 898 ಕಾರ್ಯಗಾರ ವಿಭಾಗದ (ಶಿಕ್ಷಕರು, ಮೆಕ್ಯಾನಿಕ್, ಕಾರ್ಯಗಾರ ಸಹಾಯಕರು) ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಆರ್ಥಿಕ ಇಲಾಖೆಯು ನೀಡಿರುವ ಅಭಿಪ್ರಾಯದನ್ವಯ ದಿನಾಂಕ:18.09.2019ರ ಸರ್ಕಾರದ ಪತ್ರದಲ್ಲಿ ನೂತನವಾಗಿ ಪ್ರಾರಂಭವಾದ ಸರ್ಕಾರಿ ಪಾಲಿಟೆಕ್ನಿಕ್ ಮತ್ತು ಇಂಜಿನಿಯರಿಂಗ್ ಸಂಸ್ಥೆಗಳಲ್ಲಿ ಶಿಕ್ಷಕರು, ಮೆಕ್ಯಾನಿಕ್, ಕಾರ್ಯಗಾರ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ AICTE Revised Norms ರನ್ವಯ ಪರಿಶೀಲಿಸಿ, ಈ ಹಿಂದೆ Norms ಬದಲಾವಣೆಗೆ ಮುನ್ನ ಇದ್ದ ಸಿಬ್ಬಂದಿ ಮಾದರಿಯನ್ನು ಪರಿಷ್ಕರಿಸಿ, ಅದರಂತೆ ಗುರುತಿಸಿರುವ ಹೆಚ್ಚುವರಿ ಸಿಬ್ಬಂದಿ ಮಾಹಿತಿಯನ್ನು ನೀಡುವಂತೆ ಹಾಗೂ Re-distribution/Re-deployment ಮಾಡಿದ ನಂತರ ಅವಶ್ಯವಿರುವ ಸಿಬ್ಬಂದಿಗೆ ಮಾತ್ರ ಪುನರ್ ಪರಿಶೀಲಿಸಿ ಮರುಪ್ರಸ್ತಾವನೆ ಸಲ್ಲಿಸುವಂತೆ ಹಾಗೂ ಅಲ್ಲಿಯವರೆಗೆ ಯಾವುದೇ ನೇಮಕಾತಿ ಪ್ರಕ್ರಿಯೆಯನ್ನು ಮಾಡದೇ, ಮಾಡಿದ್ದಲ್ಲಿ ಸ್ಥಗಿತಗೊಳಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ರವರಿಗೆ ತಿಳಿಸಲಾಗಿದೆ. |
| ಮೆಕ್ಯಾನಿಕ್ | 166 | |
| ಕಾರ್ಯಗಾರ ಸಹಾಯಕರು | 638 | |
| **ಒಟ್ಟು** | **1128** | |

| | | |
|---|---|---|
| ಇ) | ರಾಜ್ಯದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಹಲವಾರು ವರ್ಷಗಳಿಂದ ಖಾಲಿ ಇರುವ ಬೋಧಕ/ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ಅಗತ್ಯವಾಗಿ ಬೇಕಾಗಿರುವ ವೃಂದ ಮತ್ತು ನೇಮಕಾತಿ ನಿಯಮಗಳನ್ನು ತಿದ್ದುಪಡಿ ಮಾಡಬೇಕಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಸರ್ಕಾರಿ ಇಂಜಿನಿಯರಿಂಗ್ ಸಂಸ್ಥೆಗಳಲ್ಲಿನ ಬೋಧಕ ಸಿಬ್ಬಂದಿಗಳನ್ನು ಎ.ಐ.ಸಿ.ಟಿ.ಇ ನಿಯಮಗಳನ್ವಯ ಭರ್ತಿಮಾಡಬೇಕಾಗಿದ್ದು, ಮಾರ್ಚ್ 2019 ರಂದು 07ನೇ ಎ.ಐ.ಸಿ.ಟಿ.ಇ ನಿಯಮಗಳನ್ನು ಜಾರಿಗೆ ಬಂದಿದ್ದು, ಇದರನ್ವಯ ನೇಮಕಾತಿ ವಿಧಾನ, ವಿದ್ಯಾರ್ಹತೆ ಮತ್ತು ಸೇವಾ ಷರತ್ತುಗಳನ್ನು ವೃಂದ ಮತ್ತು ನೇಮಕಾತಿ ನಿಯಮಾವಳಿಗಳಲ್ಲಿ ಅಳವಡಿಸಿಕೊಂಡ ನಂತರ ಸದರಿ ಹುದ್ದೆಗಳನ್ನು ಭರ್ತಿ ಮಾಡಬೇಕಾಗಿರುತ್ತದೆ. ತಾಂತ್ರಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಪ್ರಕ್ರಿಯೆಯು ಚಾಲ್ತಿಯಲ್ಲಿದ್ದು, ವೃಂದ ಮತ್ತು ನೇಮಕಾತಿ ನಿಯಮಗಳು ಪರಿಷ್ಕರಣೆಯಾಗಿ ಜಾರಿಗೆ ಬಂದ ನಂತರ ಖಾಲಿಯಿರುವ ಬೋಧಕ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಜರುಗಿಸಲಾಗುವುದು. |
| ಈ) | ಹಾಗಿದ್ದಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಮಾರ್ಪಡಿಸಲು ಇರುವ ತೊಂದರೆಗಳೇನು; ಯಾವ ಕಾಲಮಿತಿಯೊಳಗೆ ಸರ್ಕಾರ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಲು/ ಮಾರ್ಪಡಿಸಿ ಖಾಲಿ ಇರುವ ಬೋಧಕ/ ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ಮುಂದಾಗುವುದು? | |

**ಇಡಿ 181 ಟಿಇಸಿ 2020**

**(ಡಾ॥ ಅಶ್ವತ್ಥನಾರಾಯಣ.ಸಿ.ಎನ್)**
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ)



# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 843
ವಿಧಾನಸಭೆ ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್,
ಉತ್ತರಿಸುವ ದಿನಾಂಕ : 10-12-2020
ಉತ್ತರಿಸುವ ಸಚಿವರು : ಮಾನ್ಯ ಸಮಾಜ ಕಲ್ಯಾಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಇಂಡಿ ಪಟ್ಟಣದಲ್ಲಿ ಶ್ರೀ ಸಮಗಾರ ಹರಳಯ್ಯ ಸಮುದಾಯ ಭವನ ನಿರ್ಮಾಣ ಮಾಡಲು ಪ್ರಸ್ತಾವನೆ ಸರ್ಕಾರಕ್ಕೆ ಬಂದಿರುವುದು ನಿಜವೇ; ಸದರಿ ಯೋಜನೆಯ ರೂಪುರೇಷೆಗಳೇನು; | ಹೌದು.<br>ವಿಜಯಪುರ ಜಿಲ್ಲೆ, ಇಂಡಿ ತಾಲ್ಲೂಕು ಕೇಂದ್ರದಲ್ಲಿ ಶ್ರೀ ಸಮಗಾರ ಹರಳಯ್ಯ ಭವನ ನಿರ್ಮಾಣ ಸಂಬಂಧ ಪಟ್ಟಣ ಪಂಚಾಯತಿಯ ರಿ.ನಂ.647/ಬ ಪ್ಲಾಟ್ ನಂ.32 ಕ್ಷೇತ್ರ 517.46 ಚ.ಮೀ (5570 ಚ.ಅ) ಸಿ.ಎ ನಿವೇಶನವನ್ನು ರೂ.15,39,856/-ಗಳ ವೆಚ್ಚದಲ್ಲಿ ಖರೀದಿಸಲು ಅನುಮತಿ ನೀಡಿ, ಅನುದಾನ ಬಿಡುಗಡೆ ಮಾಡುವ ಕುರಿತಾದ ಪ್ರಸ್ತಾವನೆಯಾಗಿರುತ್ತದೆ. |
| ಆ) | ಯಾವಾಗ ಪ್ರಸ್ತಾವನೆ ಬಂದಿದೆ; ಇದುವರೆಗೂ ಭವನ ನಿರ್ಮಾಣಕ್ಕೆಂದು ಅನುದಾನ ಮಂಜೂರು ಮಾಡದಿರಲು ಕಾರಣವೇನು; | ಸರ್ಕಾರದಲ್ಲಿ ದಿನಾಂಕ: 22-11-2019ರಂದು ಸ್ವೀಕೃತಗೊಂಡಿರುತ್ತದೆ.<br>ಈಗಾಗಲೇ, ಇಂಡಿ ತಾಲ್ಲೂಕು ಕೇಂದ್ರದಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ಭವನ ಡಾ: ಬಾಬು ಜಗಜೀವನ ರಾಂ ಭವನ ನಿರ್ಮಾಣಕ್ಕೆ ಮಂಜೂರಾತಿ ನೀಡಲಾಗಿದ್ದು ಅದೇ ಸ್ಥಳದಲ್ಲಿ ಶ್ರೀ ಸಮಗಾರ ಹರಳಯ್ಯ ಸಮುದಾಯ ಭವನ ನಿರ್ಮಾಣ ಮಾಡಲು ಅನುಮತಿ ನೀಡುವುದು ಸೂಕ್ತವಾಗಲಾರದು ಎಂಬ ಕಾರಣಕ್ಕಾಗಿ ಸದರಿ ಭವನ ನಿರ್ಮಾಣಕ್ಕೆ ಅನುಮತಿ ನೀಡಿರುವುದಿಲ್ಲ. |
| ಇ) | ಸದರಿ ಕಾಮಗಾರಿಗೆ ಅನುದಾನ ಮಂಜೂರು ಮಾಡುವ ಆಸಕ್ತಿ ಸರ್ಕಾರಕ್ಕೆ ಇದೆಯೇ; | |
| ಈ) | ಇದ್ದಲ್ಲಿ ಯಾವಾಗ ಮತ್ತು ಎಷ್ಟು ಅನುದಾನವನ್ನು ಯಾವ ಕಾಲಮಿತಿಯೊಳಗೆ ಮಂಜೂರು ಮಾಡಲಾಗುವುದು; ಅದಕ್ಕಾಗಿ ಸರ್ಕಾರ ಕೈಗೊಳ್ಳುವ ಕ್ರಮಗಳೇನು? (ವಿವರ ನೀಡುವುದು) | |

ಸಕಇ 476 ಪಕವಿ 2020

(ಬಿ. ಶ್ರೀರಾಮುಲು)
ಮಾನ್ಯ ಸಮಾಜ ಕಲ್ಯಾಣ ಸಚಿವರು.



**ಕರ್ನಾಟಕ ವಿಧಾನ ಸಭೆ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 594 |
| ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ |
| ಉತ್ತರಿಸುವ ದಿನಾಂಕ | : | 10/12/2020 |
| ಉತ್ತರಿಸುವ ಸಚಿವರು | : | ಮಾನ್ಯ ಸಮಾಜ ಕಲ್ಯಾಣ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2018-19, 2019-20 ಮತ್ತು 2020-21ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆಯಿಂದ ಸರ್ಕಾರಿ ವಿದ್ಯಾರ್ಥಿ ನಿಲಯ ಮತ್ತು ವಸತಿ ಶಾಲೆಗಳನ್ನು ಹೊಸದಾಗಿ ಮಂಜೂರು ಮಾಡಲಾಗಿದೆಯೇ; (ವಿಧಾನಸಭಾ ಕ್ಷೇತ್ರವಾರು ವಿವರ ನೀಡುವುದು) | 2018-19, 2019-20 ಮತ್ತು 2020-21ನೇ ಸಾಲುಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯಿಂದ ಹೊಸದಾಗಿ ಯಾವುದೇ ವಿದ್ಯಾರ್ಥಿ ನಿಲಯ ಮತ್ತು ವಸತಿ ಶಾಲೆಗಳನ್ನು ಮಂಜೂರು ಮಾಡಿರುವುದಿಲ್ಲ. |
| ಆ) | ಕಿತ್ತೂರು ವಿಧಾನಸಭಾ ಕ್ಷೇತ್ರದಲ್ಲಿ ಸಮಾಜ ಕಲ್ಯಾಣ ಇಲಾಖೆಯಡಿ ಎಷ್ಟು ವಸತಿ ನಿಲಯ ಮತ್ತು ವಸತಿ ಶಾಲೆಗಳಿವೆ; (ವಿವರ ನೀಡುವುದು) | ಕಿತ್ತೂರು ವಿಧಾನ ಸಭಾ ಕ್ಷೇತ್ರದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಒಟ್ಟು 07 ವಿದ್ಯಾರ್ಥಿ ನಿಲಯಗಳು ಹಾಗೂ 02 ಆಶ್ರಮ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ. ವಿವರಗಳು ಈ ಕೆಳಕಂಡತಿದೆ.<br><br>1. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ ಮಲ್ಲಾಪೂರಕೆ.ಎನ್<br>2. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ ಹೊಸಕೋಟಿ<br>3. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ ಮೇಕಲಮರಡಿ<br>4. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ ವನ್ನೂರ<br>5. ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ ನೇಸರಗಿ<br>6. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಚಿಕ್ಕಬೆಳ್ಳಿಕಟ್ಟಿ ತಾ॥ ಬೈಲಹೊಂಗಲ<br>7. ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಮಾಸಮರ್ಡಿ ತಾ॥ ಬೈಲಹೊಂಗಲ<br><br>1) ಆಶ್ರಮ ಶಾಲೆ ಗಜಮಿನಾಳ ತಾ॥ ಬೈಲಹೊಂಗಲ<br>2) ಆಶ್ರಮ ಶಾಲೆ ಹೊಸಕೋಟಿ ತಾ॥ ಬೈಲಹೊಂಗಲ |
| ಇ) | ಇವುಗಳಲ್ಲಿ ಸ್ವಂತ ಕಟ್ಟಡಗಳಿವೆಯೇ; ಇಲ್ಲದಿದ್ದಲ್ಲಿ ಸ್ವಂತ ಕಟ್ಟಡ ನಿರ್ಮಾಣಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಈ ಮೇಲಿನ 07 ವಿದ್ಯಾರ್ಥಿ ನಿಲಯಗಳು ಹಾಗೂ 02 ಆಶ್ರಮ ಶಾಲೆಗಳು ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ. |

| | | |
|---|---|---|
| ಈ) | ವಸತಿ ನಿಲಯ ಮತ್ತು ವಸತಿ ಶಾಲೆಗಳ ಹೊಸ ಮಂಜೂರಾತಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲ್ಪಟ್ಟಿದ್ದು ಈ ಕುರಿತು ಸರ್ಕಾರವು ಕೈಗೊಂಡ ಕ್ರಮವೇನು? (ವಿವರ ನೀಡುವುದು) | ವಸತಿ ನಿಲಯ ಮತ್ತು ವಸತಿ ಶಾಲೆಗಳ ಮಂಜೂರಾತಿಗಾಗಿ ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. ಪ್ರಸ್ತಾವನೆ ಸ್ವೀಕೃತವಾದಲ್ಲಿ ಅನುದಾನ ಲಭ್ಯತೆಯನ್ನು ಅನುಸರಿಸಿ ಕ್ರಮ ಕೈಗೊಳ್ಳಲಾಗುವುದು. |

ಸಕಇ 470 ಪಕವಿ 2020

(ಬಿ. ಶ್ರೀರಾಮುಲು)
ಮಾನ್ಯ ಸಮಾಜ ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 887

ಮಾನ್ಯ ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)

ಉತ್ತರಿಸಬೇಕಾದ ದಿನಾಂಕ : 10-12-2020

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಳಗಾವಿ ಜಿಲ್ಲೆಯ ಬೈಲಹೊಂಗಲ ಪಟ್ಟಣದಲ್ಲಿ ತಾಯಿ ಮತ್ತು ಮಕ್ಕಳ ಆಸ್ಪತ್ರೆಯ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಹಾಗಾದರೆ, ಬೈಲಹೊಂಗಲದಲ್ಲಿ ತಾಯಿ ಮತ್ತು ಮಕ್ಕಳ ಆಸ್ಪತ್ರೆ ಪ್ರಾರಂಭಿಸುವ ಕುರಿತು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆಯೇ; | ಬೈಲಹೊಂಗಲದಲ್ಲಿ ತಾಯಿ ಮತ್ತು ಮಕ್ಕಳ ಆಸ್ಪತ್ರೆ ಪ್ರಾರಂಭಿಸಲು 2021-22ನೇ ಸಾಲಿನ ಎನ್.ಹೆಚ್.ಎಂ ಕ್ರಿಯಾ ಯೋಜನೆಯಲ್ಲಿ ಸೇರ್ಪಡೆಗೊಳಿಸಲಾಗಿರುತ್ತದೆ. |
| ಇ | ಹಾಗಿದ್ದಲ್ಲಿ, ಪ್ರಸ್ತಾವನೆಯು ಸರ್ಕಾರದಲ್ಲಿ ಯಾವ ಹಂತದಲ್ಲಿದೆ; | 2021-22ನೇ ಸಾಲಿನ ಎನ್.ಹೆಚ್.ಎಂ ಕ್ರಿಯಾ ಯೋಜನೆಯಲ್ಲಿ ಸದರಿ ಕಾಮಗಾರಿಗೆ ಅನುಮೋದನೆ ದೊರೆತಲ್ಲಿ 2021-22ನೇ ಸಾಲಿನಲ್ಲಿ ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮವಹಿಸಲಾಗುವುದು. |
| ಈ | ಸದರಿ ಆಸ್ಪತ್ರೆಯ ತುರ್ತಾಗಿ ಪ್ರಾರಂಭಿಸಬೇಕಾಗಿರುವುದರಿಂದ ಪ್ರಸ್ತಾವನೆಗೆ ಮಂಜೂರಾತಿ ನೀಡಿ ಆಸ್ಪತ್ರೆ ಯಾವಾಗ ಪ್ರಾರಂಭಿಸಲಾಗುವುದು? | |

ಆಕುಕ 151 ಎಸ್‌ಬಿವಿ 2020.

(ಡಾ. ಕೆ ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 132 |
| ಮಾನ್ಯ ಸದಸ್ಯರ ಹೆಸರು | ಶ್ರೀ ಮಹದೇವಪ್ಪ ಶಿವಲಿಂಗಪ್ಪ ಯಾದವಾಡ್ (ರಾಮದುರ್ಗ) |
| ಉತ್ತರಿಸಬೇಕಾದ ದಿನಾಂಕ | 10–12–2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಮದುರ್ಗ ತಾಲ್ಲೂಕಿನ ಸಾರ್ವಜನಿಕ ಆಸ್ಪತ್ರೆಗೆ ಎಷ್ಟು ಹುದ್ದೆಗಳು ಮಂಜೂರಾಗಿವೆ; (ವಿವರ ನೀಡುವುದು) | ರಾಮದುರ್ಗ ತಾಲ್ಲೂಕಿನ ಸಾರ್ವಜನಿಕ ಆಸ್ಪತ್ರೆಗೆ 70 ಹುದ್ದೆಗಳು ಮಂಜೂರಾಗಿವೆ. (ಅನುಬಂಧದಲ್ಲಿ ಲಗತ್ತಿಸಿದೆ) |
| ಆ | ಖಾಲಿಯಿರುವ ಹುದ್ದೆಗಳನ್ನು ತುಂಬದೇ ಇರುವ ಕಾರಣ ಆಸ್ಪತ್ರೆಗೆ ಬರುವ ರೋಗಿಗಳಿಗೆ ತೊಂದರೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಪ್ರಸ್ತುತ ಇರುವ ವೈದ್ಯರು ಮತ್ತು ಸಿಬ್ಬಂದಿಗಳಿಂದ ಹಾಗೂ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಂಡಿರುವ ಸಿಬ್ಬಂದಿಗಳ ಮೂಲಕ ರೋಗಿಗಳಿಗೆ ತೊಂದರೆಯಾಗದಂತೆ ಚಿಕಿತ್ಸೆ ನೀಡಲಾಗುತ್ತಿದೆ. |
| ಇ | ಖಾಲಿಯಿರುವ ಹುದ್ದೆಗಳನ್ನು ತುಂಬಲು ಸರ್ಕಾರ ಯಾವ ಕ್ರಮ ತೆಗೆದುಕೊಂಡಿದೆ; (ವಿವರ ನೀಡುವುದು) | ಇಲಾಖೆಯಲ್ಲಿ ಖಾಲಿ ಇರುವ 824 ತಜ್ಞ ವೈದ್ಯಾಧಿಕಾರಿಗಳು, 1246 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಮತ್ತು 88 ದಂತ ಆರೋಗ್ಯಾಧಿಕಾರಿ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸಿದ್ದು, ನೇಮಕಾತಿ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. ಮುಂದುವರೆದು, ಇಲಾಖೆಯಲ್ಲಿ ಖಾಲಿ ಇರುವ ಅರೆ ವೈದ್ಯಕೀಯ ಸಿಬ್ಬಂದಿಯನ್ನು ಸಹ ವಿಶೇಷ ನೇಮಕಾತಿ ನಿಯಮಗಳ ಮೂಲಕ ಭರ್ತಿ ಮಾಡಿಕೊಳ್ಳಲು ಕ್ರಮವಹಿಸಲಾಗುತ್ತಿದೆ. |
| ಈ | ಖಾಲಿಯಿರುವ ಹುದ್ದೆಗಳನ್ನು ಯಾವಾಗ ತುಂಬಲಾಗುವುದು ವಿವರಣೆ ನೀಡುವುದು? | |

ಸಂಖ್ಯೆ: ಆಕುಕ 97 ಹೆಚ್‌ಪಿಸಿ 2020

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಅನುಬಂಧ-1

LAQ - 132

## ಸಾರ್ವಜನಿಕ ಆಸ್ಪತ್ರೆ ರಾಮದುರ್ಗ

| ಮಂಜೂರು ಕಾರ್ಯನಿರತ ಮತ್ತು ಖಾಲಿ ಹುದ್ದೆಗಳ ವಿವರ | | | | | |
|---|---|---|---|---|---|
| ಕ್ರ.ಸಂ | ಹುದ್ದೆಗಳ ಸಂಖ್ಯೆ | ಮಂಜೂರಾದ | ಕಾರ್ಯನಿರತ | ಖಾಲಿ | ಷರಾ |
| 1 | ಮುಖ್ಯ ವೈದ್ಯಾಧಿಕಾರಿಗಳು | 1 | 1 | 0 | |
| 2 | ಫಿಜಿಸಿಯನ್ | 1 | 0 | 1 | |
| 3 | ಸರ್ಜನ್ | 1 | 0 | 1 | |
| 4 | ಸ್ತ್ರೀ ರೋಗ ತಜ್ಞರು | 1 | 1 | 0 | |
| 5 | ಚಿಕ್ಕ ಮಕ್ಕಳ ತಜ್ಞರು | 1 | 0 | 1 | ಗುತ್ತಿಗೆ ಆಧಾರ 1 |
| 6 | ಕಿವಿ ಮೂಗು ಗಂಟಲು ತಜ್ಞರು | 1 | 0 | 1 | |
| 7 | ಚರ್ಮ ರೋಗ ತಜ್ಞರು | 1 | 0 | 1 | |
| 8 | ಕಣ್ಣಿನ ತಜ್ಞರು | 1 | 1 | 0 | |
| 9 | ಅರವಳಿಕೆ ತಜ್ಞರು | 1 | 1 | 0 | |
| 10 | ಎಲುಬು ಕೀಲು ತಜ್ಞರು | 1 | 1 | 0 | |
| 11 | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು | 1 | 0 | 1 | |
| 12 | ದಂತ ವೈದ್ಯರು | 2 | 0 | 2 | |
| 13 | ಸಹಾಯಕ ಆಡಳಿತಾಧಿಕಾರಿಗಳು | 1 | 1 | 0 | |
| 14 | ಪ್ರ.ದ. ಸಹಾಯಕರು | 2 | 1 | 1 | |
| 15 | ದ್ವಿ.ದ. ಸಹಾಯಕರು | 1 | 0 | 1 | |
| 16 | ಹಿರಿಯ ಫಾರ್ಮಾಸಿಸ್ಟ್ | 1 | 1 | 0 | |
| 17 | ಕಿರಿಯ ಫಾರ್ಮಾಸಿಸ್ಟ್ | 1 | -1 | 0 | |
| 18 | ಹಿರಿಯ ಪ್ರಯೋಗಾಲಯ ತಂತ್ರಜ್ಞರು | 1 | 0 | 1 | |
| 19 | ಕಿರಿಯ ಪ್ರಯೋಗಾಲಯ ತಂತ್ರಜ್ಞರು | 2 | 2 | 0 | |
| 20 | ನರ್ಸಿಂಗ್ ಸೂಪರಿಡೆಂಟ್ ಗ್ರೇಡ್ 2 | 1 | 0 | 1 | |
| 21 | ಸ್ಟಾಫ್ ನರ್ಸ್ | 13 | 13 | 0 | ಎನ್.ಆರ್.ಹೆಚ್.ಎಮ್ 5 |
| 22 | ಕ್ಷ-ಕಿರಣ ತಂತ್ರಜ್ಞರು | 1 | 0 | 1 | |
| 23 | ಕಿರಿಯ ಮಹಿಳಾ ಆರೋಗ್ಯ ಸಹಾಯಕಿ | 3 | 1 | 2 | |
| 24. | ವಾಹನ ಚಾಲಕರು | 2 | 2 | 0 | |
| 25 | ಡಿ ವರ್ಗ ನೌಕರರು | 28 | 16 | 12 | ನಾನ್ ಕ್ಲಿನಿಕ್9 |
| | ಒಟ್ಟು | 70 | 43 | 27 | |

